

**CIVIC**
BANGALORE
CITIZENS VOLUNTARY INITIATIVE FOR THE CITY



# ಅಂಗನವಾಡಿಗಳತ್ತ ಒಂದು ನೋಟ

## ಯೋಜನೆಗಳು, ಕಾರ್ಯಕ್ರಮಗಳ ಬಗ್ಗೆ ಒಂದು ಸರಳ ಮಾಹಿತಿ ಕೈಪಿಡಿ



ಮಾಹಿತಿ ಸಂಗ್ರಹ ಮತ್ತು ಸಿದ್ಧಪಡಿಸಿದವರು
**ವೆಂಕಟೇಶ್ ಡಿ. ಕೊನಘಟ್ಟ**

CIVIC
BANGALORE
CITIZENS VOLUNTARY INITIATIVE
ಸಿವಿಕ್ ಬೆಂಗಳೂರು

# ನಮ್ಮ ಅಂಗನವಾಡಿಗಳತ್ತ ಒಂದು ನೋಟ

ಮಾಹಿತಿ ಸಂಗ್ರಹ ಮತ್ತು ಸಿದ್ಧಪಡಿಸಿದವರು
ವೆಂಕಟೇಶ್ ಡಿ. ಕೊನಘಟ್ಟ

ಯೋಜನೆಗಳು, ಕಾರ್ಯಕ್ರಮಗಳ ಬಗ್ಗೆ
ಒಂದು ಸರಳ ಮಾಹಿತಿ ಕೈಪಿಡಿ

# ಪರಿವಿಡಿ





# ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಉದ್ದೇಶ.

**ಉದ್ದೇಶ :**

- 0–6 ವರ್ಷದೊಳಗಿನ ಮಕ್ಕಳ ಪೌಷ್ಠಿಕತೆ ಮಟ್ಟವನ್ನು ಹಾಗೂ ಆರೋಗ್ಯ ಸ್ಥಿತಿಯನ್ನು ಸುಧಾರಿಸುವುದು.
- ಮಗುವಿನ ಮಾನಸಿಕ, ಸಾಮಾಜಿಕ, ದೈಹಿಕ ಸಮರ್ಪಕ ಬೆಳವಣಿಗೆಗೆ ಬುನಾದಿ ಹಾಕುವುದು.
- ಶಿಶುಗಳ ಮರಣ, ಅಪೌಷ್ಠಿಕತೆ, ಕಾಯಿಲೆ ಪ್ರಮಾಣವನ್ನು ಕಡಿಮೆ ಮಾಡುವುದು.
- ಮಕ್ಕಳು ಶಾಲೆ ಬಿಡುವ ಪ್ರಮಾಣವನ್ನು ಕಡಿಮೆ ಮಾಡುವುದು.
- ಪೌಷ್ಠಿಕಾಂಶ ಹಾಗೂ ಆರೋಗ್ಯ ಶಿಕ್ಷಣವನ್ನು ನೀಡುವುದರ ಮೂಲಕ ಮಕ್ಕಳ ಸಾಮಾನ್ಯ ಆರೋಗ್ಯ ಹಾಗೂ ಪೌಷ್ಠಿಕ ಮಟ್ಟವನ್ನು ಕಾಪಾಡುವ ಬಗ್ಗೆ ತಾಯಂದಿರ ಸಾಮರ್ಥ್ಯವನ್ನು ಹೆಚ್ಚಿಸುವುದು.
- ಮಗುವಿನ ಸರ್ವಾಂಗೀಣ ಅಭಿವೃದ್ಧಿಗೆ ಇತರೆ ಇಲಾಖೆ ಗಳೊಂದಿಗೆ ಪರಿಣಾಮಕಾರಿಯಾದ ಸಮನ್ವಯತೆಯನ್ನು ಸಾಧಿಸುವುದು.
- ಮಹಿಳೆಯರು ಮತ್ತು ಪ್ರಾಯಪೂರ್ವ ಬಾಲಕಿಯರಿಗೆ ವಿವಿಧ ಸೇವೆಗಳನ್ನು ಒದಗಿಸುವುದು.

**ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿಯಲ್ಲಿ ದೊರಕುವ ಸೇವೆಗಳು**

- ಪೂರಕ ಪೌಷ್ಠಿಕ ಆಹಾರ
- ಚುಚ್ಚು ಮದ್ದು
- ಆರೋಗ್ಯ ತಪಾಸಣೆ
- ಮಾಹಿತಿ ಸೇವೆ



- ಶಾಲಾ ಪೂರ್ವ ಶಿಕ್ಷಣ
- ಪೌಷ್ಠಿಕತೆ ಮತ್ತು ಆರೋಗ್ಯ ಶಿಕ್ಷಣ

**ಅಂಗನವಾಡಿ ಎಂದರೇನು?**
ಮಕ್ಕಳು ಹಾಗೂ ತಾಯಂದಿರಿಗೆ ಅವರ ಗ್ರಾಮದಲ್ಲೇ ಅಥವಾ ವಿಭಾಗದಲ್ಲೇ ವಿವಿಧ ಸೇವೆಗಳನ್ನು ಒದಗಿಸುವ ಕೇಂದ್ರವೇ ಅಂಗನವಾಡಿ.

**ಅಂಗನವಾಡಿ ಪ್ರಾರಂಭಿಸಲು ಜನಸಂಖ್ಯೆ ಪ್ರಮಾಣ**

- ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲಿ 1,000 (ಒಂದು ಸಾವಿರ ಜನಸಂಖ್ಯೆಗೆ) ಒಂದು ಅಂಗನವಾಡಿ ಪ್ರಾರಭಿಸುವುದು.
- ಬುಡಕಟ್ಟು ಪ್ರದೇಶದಲ್ಲಿ 700 (ಏಳು ನೂರು ಜನಸಂಖ್ಯೆ) ಗೆ ಒಂದು ಅಂಗನವಾಡಿ.
- ಸಣ್ಣ ಹಳ್ಳಿಗಳಾದರೆ 300 (ಮೂರು ನೂರು ಜನಸಂಖ್ಯೆಗೆ) ಗೆ ಒಂದು ಅಂಗನವಾಡಿ.

## ಪೂರಕ ಪೌಷ್ಠಿಕ ಆಹಾರ ಯಾರು ಯಾರಿಗೆ ಎಷ್ಟು ?

**6 ತಿಂಗಳಿಂದ 3 ವರ್ಷದ ಮಕ್ಕಳಿಗೆ**



- ಹೆಸರು ಬೇಳೆ–500 ಗ್ರಾಂ,
- ಬೆಲ್ಲ–600ಗ್ರಾಂ, ನ್ಯೂಟ್ರಿ ಮಿಕ್ಸ್–2 ಕೆ.ಜಿ.
- ಹಾಲಿನ ಪುಡಿ–180 ಗ್ರಾಂ,
  (500 ಕ್ಯಾಲೋರಿಗಳು, 12 ರಿಂದ 15 ಗ್ರಾಂ ಪ್ರೋಟಿನ್)

ಗರ್ಭಿಣಿಯರಿಗೆ



- ಕಡಲೇ ಬೀಜ–600ಗ್ರಾಂ,
- ಬೆಲ್ಲ–600ಗ್ರಾಂ,
- ಹೆಸರು ಕಾಳು–300ಗ್ರಾಂ
- ಮಲ್ಟಿಗ್ರೇನ್ ಗೋಧಿ ಹಿಟ್ಟು–3.5 ಕೆ.ಜಿ. (600 ಕ್ಯಾಲೋರಿಗಳು,18ರಿಂದ 20 ಗ್ರಾಂ ಪ್ರೋಟಿನ್)

ಬಾಣಂತಿ



- ಕಡಲೇ ಬೀಜ–600ಗ್ರಾಂ,
- ಬೆಲ್ಲ–600ಗ್ರಾಂ,
- ಹೆಸರು ಕಾಳು–300ಗ್ರಾಂ
- ಮಲ್ಟಿಗ್ರೇನ್ ಗೋಧಿ ಹಿಟ್ಟು–3.5 ಕೆ.ಜಿ.
- (600 ಕ್ಯಾಲೋರಿಗಳು,18ರಿಂದ 20 ಗ್ರಾಂ ಪ್ರೋಟಿನ್)

ಪ್ರಾಯಪೂರ್ವ ಬಾಲಕಿಯರಿಗೆ (ಕಿಶೋರಿ)



- ಕಡಲೇ ಬೀಜ–600ಗ್ರಾಂ,
- ಬೆಲ್ಲ–600ಗ್ರಾಂ,
- ಹೆಸರು ಕಾಳು–300ಗ್ರಾಂ
- ಮಲ್ಟಿಗ್ರೇನ್ ಗೋಧಿ ಹಿಟ್ಟು–3.5 ಕೆ.ಜಿ.
- (600 ಕ್ಯಾಲೋರಿಗಳು, 18ರಿಂದ 20 ಗ್ರಾಂ ಪ್ರೋಟಿನ್)

## 3 ರಿಂದ 6 ವರ್ಷದ ಅಂಗನವಾಡಿಗೆ ಬರುವ ಮಕ್ಕಳಿಗೆ ಪ್ರತಿದಿನ ವಿತರಿಸುವ ಆಹಾರದ ವಿವರ



- ಚಿತ್ರಾನ್ನ, ರವೆ ಲಾಡು, ಅಕ್ಕಿ ಕಿಚಡಿ, ಹೆಸರು ಬೇಳೆ ಪಾಯಸ,
- ವಾರದಲ್ಲಿ 3 ದಿನ 150 ಮಿ.ಲಿ ಹಾಲು.
- (500 ಕ್ಯಾಲೋರಿಗಳು, 12 ರಿಂದ 15 ಗ್ರಾಂ ಪ್ರೋಟಿನ್)

| ವಾರ | ಬೆಳಿಗ್ಗೆ | ಮಧ್ಯಾಹ್ನ |
|---|---|---|
| ಸೋಮವಾರ | ಹೆಸರು ಬೇಳೆ ಪಾಯಸ | ಕಿಚಡಿ |
| ಮಂಗಳವಾರ | ಚಿತ್ರಾನ್ನ | ಚಿತ್ರಾನ್ನ |
| ಬುಧವಾರ | ಹೆಸರು ಬೇಳೆ ಪಾಯಸ | ಕಿಚಡಿ |
| ಗುರುವಾರ | ಚಿತ್ರಾನ್ನ | ಚಿತ್ರಾನ್ನ |
| ಶುಕ್ರವಾರ | ಹೆಸರು ಬೇಳೆ ಪಾಯಸ | ಕಿಚಡಿ |
| ಶನಿವಾರ | ಚಿತ್ರಾನ್ನ | ಚಿತ್ರಾನ್ನ |

### ತೀವ್ರ ಅಪೌಷ್ಠಿಕತೆಯುಳ್ಳ ಮಕ್ಕಳಿಗೆ

- ವಾರದಲ್ಲಿ 4 ದಿನ ಮೊಟ್ಟೆ ಮತ್ತು 2 ದಿನ 200 ಮಿ.ಲಿ ಹಾಲು.
- ಮೊಟ್ಟೆ ತಿನ್ನದ ಮಕ್ಕಳಿಗೆ 6 ದಿನ ಹಾಲು ಹೆಚ್ಚುವರಿಯಾಗಿ ನೀಡಲಾಗುವುದು.
- (800 ಕ್ಯಾಲೋರಿಗಳು, 20 ರಿಂದ 25 ಗ್ರಾಂ ಪ್ರೋಟಿನ್)



**ವಿ. ಸೂಚನೆ:- ಆಯಾ ಜಿಲ್ಲಾವಾರು ಸಂದರ್ಭನುಸಾರ ಮತ್ತು ಸ್ಥಳೀಯ ಆಹಾರ ಪದ್ಧತಿಗೆ ಅನುಗುಣವಾಗಿ ಪೂರಕ ಪೌಷ್ಠಿಕ ಆಹಾರವು ವಿತರಣೆಯಾಗುತ್ತದೆ.**

# ಹೆಣ್ಣು ಮಗುವಿಗೆ ಭಾಗ್ಯಲಕ್ಷ್ಮೀ ಯೋಜನೆ

**ಪ್ರಸ್ತಾವನೆ, ಉದ್ದೇಶ:**

2001 ಜನಗಣತಿಯು ಪ್ರಕಾರ ಕರ್ನಾಟಕದಲ್ಲಿ ಲಿಂಗಾನುಪಾತವು 1000/964 ಆಗಿದ್ದು, ಇದು 2011ರ ಜನಗಣತಿಯ ಪ್ರಕಾರ 1000/937 ಆಗಿರುತ್ತದೆ. ಈ ಅನುಪಾತವು ರಾಷ್ಟ್ರದ ಸರಾಸರಿ ಲಿಂಗಾನುಪಾತಕ್ಕಿಂತ ಉತ್ತಮವಾಗಿದ್ದರೂ ಸಹ, ಪ್ರಸ್ತುತ ಹೆಣ್ಣು ಮಗುವಿನ ಸ್ಥಾನಮಾನಕ್ಕೆ ಹೆಚ್ಚಿನ ಮೌಲ್ಯ ಕಲ್ಪಿಸುವ ಬಗ್ಗೆ ಬಲವಾದ ವಾದವಿರುತ್ತದೆ. ಗಂಡು ಸಂತತಿಯ ಉತ್ತೇಜನಕ್ಕೆ ಅನೇಕ ಸಾಮಾಜಿಕ ಅರ್ಥಿಕ ಕಾರಣವಿದ್ದರೂ, ಇದು ಹೆಣ್ಣು ಮಕ್ಕಳ ಆರೋಗ್ಯ, ಶಿಕ್ಷಣ, ಪೋಷಣೆ ಹಾಗೂ ಸರ್ವಾಂಗೀಣ ಅಭಿವೃದ್ಧಿಗೆ ಅಡಚಣೆಯಾಗಿದೆ.

ಹೆಣ್ಣು ಮಗುವಿನ ಬಗ್ಗೆ ಸಮಾಜದಲ್ಲಿರುವ ದೋರಣೆಗಳನ್ನು ಬದಲಿಸಲು 2006-07 ನೇ ಸಾಲಿನಲ್ಲಿ ಆಯವ್ಯಯ ಭಾಷಣದಲ್ಲಿ ಹೆಣ್ಣು ಮಕ್ಕಳ ರಕ್ಷಣೆಗೆ **"ಭಾಗ್ಯಲಕ್ಷ್ಮಿ"** ಎಂಬ ಹೊಸ ಕಲ್ಯಾಣ ಯೋಜನೆಯನ್ನು ಜಾರಿಗೆ ತರಲಾಗಿದೆ.

ಹೆಣ್ಣು ಮಗುವನ್ನು ಆರ್ಥಿಕ ನೆರವಿನ ಮೂಲಕ ಸಬಲೀಕರಣಗೊಳಿಸಿ ಸ್ವಾವಲಂಬಿಯನ್ನಾಗಿ ಮಾಡುವುದು. ಗಂಡು-ಹೆಣ್ಣು ಎಂಬ ಲಿಂಗ ತಾರತಮ್ಯವನ್ನು ಹೋಗಲಾಡಿಸಿ ಮಹಿಳೆಯು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಸ್ವಾವಲಂಬಿಯನ್ನಾಗಿ ಮಾಡುವುದು ಈ ಯೋಜನೆಯ ಮುಖ್ಯ ಉದ್ದೇಶ.



**ಭಾಗ್ಯಲಕ್ಷ್ಮೀ ಯೋಜನೆಗೆ ಅರ್ಜಿ ಸಲ್ಲಿಸುವ ವಿಧಾನ**

ಪೋಷಕರು ಭಾಗ್ಯಲಕ್ಷ್ಮೀ ಅರ್ಜಿ ನಮೂನೆಯನ್ನು ಸಮೀಪದ ಅಂಗನವಾಡಿ ಕೇಂದ್ರದಿಂದ ಪಡೆದು ಭರ್ತಿ ಮಾಡಿ ಸೂಕ್ತ ದಾಖಲೆಗಳೊಂದಿಗೆ ಆರು ತಿಂಗಳೊಳಗಾಗಿ ಅಂಗನವಾಡಿ ಕಾರ್ಯಕರ್ತೆಗೆ ಸಲ್ಲಿಸಿ ಸ್ವೀಕೃತಿ ಪಡೆಯುವುದು.

**ಅರ್ಜಿಯೊಂದಿಗೆ ಸಲ್ಲಿಸಬೇಕಾದ ಅವಶ್ಯಕ ದಾಖಲೆಗಳು**

- ಮಗುವಿನ ಜನನ ಪ್ರಮಾಣ ಪತ್ರ ಧೃಢೀಕೃತಿ ಪ್ರತಿ
- ಶಾಶ್ವತ ಬಿಪಿಎಲ್ ಕಾರ್ಡ್/ಆದ್ಯತಾ ಕುಟುಂಬ ಪಡಿತರ ಚೀಟಿ ಧೃಢೀಕೃತ ಪ್ರತಿ
- ಪೋಷಕರೊಂದಿಗೆ ಮಗುವಿರುವ ಭಾವಚಿತ್ರ
- ಆದ್ಯತೆಯ ಮೇರೆಗೆ ಮಗುವಿನ ಆಧಾರ್ ಗುರುತಿನ ಚೀಟಿಯ ಪ್ರತಿ ಅಥವಾ ವಿಳಾಸದ ಯಾವುದೇ ದಾಖಲೆಗಳು.
- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ್ದಲ್ಲಿ ಜಾತಿ ಪ್ರಮಾಣ ಪತ್ರ.
- ಮಗುವಿನ ತಂದೆ ತಾಯಿಯ ವಿವಾಹದ ನೋಂದಣಿ ಪ್ರಮಾಣ ಪತ್ರದ ಪ್ರತಿ. ಅಥವಾ ಪೋಷಕರ ಸ್ವಯಂ ಘೋಷಣಾ ವಿವಾಹ ಪ್ರಮಾಣ ಪತ್ರದ ಪ್ರತಿ.

(ಮುಂದೆ ನೀಡಿರುವ ನಮೂನೆ 6 ನ್ನು ನೋಡಿ)

- ಈ ಕೆಳಕಂಡವರಿಗೆ ವಿವಾಹದ ನೋಂದಣಿ ಪ್ರಮಾಣ ಪತ್ರದಿಂದ ವಿನಾಯಿತಿ ನೀಡಲಾಗಿದೆ ಹಾಗೂ ಕೆಳಗೆ ನಮೂದಿಸಿರುವವರ ಮೂಲಕ ದೃಢೀಕರಣ ಪ್ರಮಾಣ ಪತ್ರ ಸಲ್ಲಿಸಬಹುದಾಗಿದೆ.

| | | |
|---|---|---|
| 1 | ಪರಿತ್ಯಕ್ತೆ | ಸ್ವಯಂ ಘೋಷಣಾ ಪ್ರಮಾಣ ಪತ್ರ (ನಮೂನೆ 8) |
| 2 | ಏಕ ಪೋಷಕರು | ಸ್ವಯಂ ಘೋಷಣಾ ಪ್ರಮಾಣ ಪತ್ರ (ನಮೂನೆ 7) |
| 3 | ವಿಚ್ಛೇದಿತರು | ನ್ಯಾಯಲಯದ ತೀರ್ಪಿನ ಪ್ರತಿ ಅಥವಾ ಸ್ವಯಂ ಘೋಷಣಾ ಪ್ರಮಾಣ ಪತ್ರ |
| 4 | ವಿಧವೆ ಅಥವಾ ವಿಧುರ ಆಗಿದ್ದಲ್ಲಿ | ಗಂಡ ಅಥವಾ ಹೆಂಡತಿ ಮರಣ ಪ್ರಮಾಣ ಪತ್ರದ ಪ್ರತಿ |
| 5 | ಪರಸ್ಪರ ಒಪ್ಪಿಗೆ ಯಿಂದ ಒಂದೇ ಸೂರಿನಡಿ ಜೀವಿಸುವವರು | ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಿಗರು |
| 6 | ಅನಾಥರು | ಇಬ್ಬರು ಪೋಷಕರ ಮರಣ ದೃಢೀಕರಣ ಪತ್ರದ ಪ್ರತಿ |

ಇಂತಹವರ ಮಕ್ಕಳಿಗೆ ಯೋಜನೆಯಡಿ ಅವಕಾಶ ಕಲ್ಪಿಸಲು ಮೇಲಿನ ಪ್ರಾಧಿಕಾರದಿಂದ ಪ್ರಮಾಣ ಪತ್ರ ನೀಡುವುದು ಹಾಗೂ ಈ ಬಗ್ಗೆ ಸ್ವಯಂ ಘೋಷಿತ ಪ್ರಮಾಣ ಪತ್ರ ನೀಡುವವರು ರೂ.20/-ಗಳ ಸ್ಟಾಂಪ್ ಪೇಪರ್‌ನಲ್ಲಿ ನೀಡುವುದು.

ವಿ.ಸೂ.: ಎರಡನೇ ಮಗುವನ್ನು ನೋಂದಣಿ ಮಾಡುವ ಸಂದರ್ಭದಲ್ಲಿ ಯೋಜನೆಯಡಿ ನಿಗದಿ ಪಡಿಸಿದ ಮೇಲಿನ ಎಲ್ಲಾ ದಾಖಲೆಗಳೊಂದಿಗೆ ಮಗುವಿನ ತಂದೆ ಅಥವಾ ತಾಯಿ ಶಾಶ್ವತ ಕುಟುಂಬ ಯೋಜನೆಯ ಪದ್ಧತಿಯನ್ನು ಅಳವಡಿಸಿಕೊಂಡಿರುವ (ಮಕ್ಕಳಾಗದಂತೆ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕು) ಬಗ್ಗೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ ನೀಡುವುದು.

**ಹೆಣ್ಣು ಮಗುವಿನ ಹೆಸರಲ್ಲಿ ನಿಶ್ಚಿತ ಠೇವಣಿ**

- ದಿನಾಂಕ:01.04.2006 ರಿಂದ 31.07.2008 ವರೆಗೆ ಜನಿಸಿದ ಮಗುವಿನ ಹೆಸರಿಗೆ ನಿಶ್ಚಿತ ಠೇವಣಿ–ರೂ. 10,000/–
- ದಿನಾಂಕ: 01.08.2008 ರ ನಂತರ ಜನಿಸಿದ ಮೊದಲನೇ ಮಗುವಿನ ಹೆಸರಿಗೆ – ರೂ. 19,300/–
- ದಿನಾಂಕ: 01.08.2008 ರ ನಂತರ ಜನಿಸಿದ ಎರಡನೇ ಮಗುವಿನ ಹೆಸರಿಗೆ – ರೂ.18,350/–

**18 ವರ್ಷದ ನಂತರ ಪರಿಪಕ್ವ ಮೊತ್ತ**

- ದಿನಾಂಕ:01.04.2006 ರಿಂದ 31.07.2008 ವರೆಗೆ ಜನಿಸಿದ ಮೊದಲನೇ ಮಗುವಿಗೆ ಸಿಗುವ ಮೊತ್ತ ರೂ. 34,751/–
- ದಿನಾಂಕ:01.04.2006 ರಿಂದ 31.07.2008 ವರೆಗೆ ಜನಿಸಿದ ಎರಡನೇ ಮಗುವಿಗೆ ಸಿಗುವ ಪರಿಪಕ್ವ ಮೊತ್ತ ರೂ. 40,619/–
- ದಿನಾಂಕ:01.08.2008 ರ ನಂತರ ಜನಿಸಿದ ಮೊದಲನೇ ಮಗುವಿಗೆ ಸಿಗುವ ಪರಿಪಕ್ವ ಮೊತ್ತ – ರೂ. 1,00,052
- ದಿನಾಂಕ:01.08.2008 ರ ನಂತರ ಜನಿಸಿದ ಎರಡನೇ ಮಗುವಿಗೆ ಸಿಗುವ ಪರಿಪಕ್ವ ಮೊತ್ತ – ರೂ. 1,00,097

ವಿ.ಸೂಚನೆ:- ದಿನಾಂಕ:01.08.2008 ರ ನಂತರ ಜನಿಸಿದ ಹೆಣ್ಣು ಮಕ್ಕಳಿಗೆ ವಿದ್ಯಾರ್ಥಿ ವೇತನ ಮತ್ತು ಆರೋಗ್ಯ ವಿಮೆ ಸೌಲಭ್ಯ ಇರುವುದಿಲ್ಲ.

## ದಿನಾಂಕ 1.6.2006 ರಿಂದ 31.7.2008 ರವರೆಗೆ ಜನಿಸಿದ ಹೆಣ್ಣು ಮಗುವಿಗೆ ಆರೋಗ್ಯ ವಿಮಾ ಸೌಲಭ್ಯ



ಹೆಣ್ಣು ಮಗುವಿಗೆ ಹೃದಯ ಕಾಯಿಲೆ, ಸುಟ್ಟಗಾಯ, ಕ್ಯಾನ್ಸರ್, ಕಿಡ್ನಿ, ಲಿವರ್ ಸಂಬಂಧಿಸಿದ ಕಾಯಿಲೆ ಗಳಿಗೆ ವಾರ್ಷಿಕ ಗರಿಷ್ಠ ರೂ. 25,000/- ನೀಡಲಾಗುತ್ತದೆ.

## ವಿದ್ಯಾರ್ಥಿ ವೇತನ

ದಿನಾಂಕ 01.04.2006 ರಿಂದ 31.07.2008 ವರೆಗೆ ಜನಿಸಿದ ಯೋಜನೆಯ ಫಲಾನುಭವಿ ಮಗುವಿಗೆ ವಾರ್ಷಿಕ ವಿದ್ಯಾರ್ಥಿ ವೇತನವನ್ನು ಮುಂದಿನ ಟೇಬಲ್‌ನಲ್ಲಿ ತಿಳಿಸಿರುವಂತೆ ವಿತರಿಸಲಾಗುವುದು.



ದಿನಾಂಕ 01/04/2006 ರಿಂದ 31/07/2008 ರ ವರೆಗೆ ಜನಿಸಿ ಯೋಜನೆಯಡಿ ನೋಂದಣಿಯಾದ ಮಕ್ಕಳು ವಿಧ್ಯಾರ್ಥಿ ವೇತನ ಪಡೆಯಲು ಪ್ರತಿ ತರಗತಿಯಲ್ಲೂ ವರ್ಷದಿಂದ ವರ್ಷಕ್ಕೆ ತೇರ್ಗಡೆ ಹೊಂದಬೇಕು.

| ತರಗತಿಯ ವಿವರ | ಮೊತ್ತ |
|---|---|
| 1 ರಿಂದ 3 ನೇ ತರಗತಿ | 300 |
| 4 ನೇ ತರಗತಿ | 500 |
| 5 ನೇ ತರಗತಿ | 600 |
| 6 ಮತ್ತು 7 ನೇ ತರಗತಿ | 700 |
| 8 ನೇ ತರಗತಿ | 800 |
| 9 ನೇ ಮತ್ತು 10ನೇ ತರಗತಿ | 1000 |
| 11 ಮತ್ತು 12 ನೇ ತರಗತಿ (I and II puc) | 1,200 |

**ಭಾಗ್ಯಲಕ್ಷ್ಮಿ ಬಾಂಡ್‌ನ ಪರಿಪಕ್ವ ಮೊತ್ತ ಪಡೆಯಲು ಇರುವ ಷರತ್ತುಗಳು**

- ಆರೋಗ್ಯ ಇಲಾಖೆಯಿಂದ ಮಗುವಿಗೆ ಕಡ್ಡಾಯವಾಗಿ ರೋಗ ನಿರೋಧಕ ಲಸಿಕೆ ಹಾಕಿಸಿರಬೇಕು.
- ಮಗು ಶಾಲಾ ಪೂರ್ವ ಶಿಕ್ಷಣಕ್ಕೆ (ಅಂಗನವಾಡಿ) ಅಥವಾ ಖಾಸಗಿ ಶಿಕ್ಷಣ ಸಂಸ್ಥೆಗೆ ಹಾಜರಾಗಬೇಕು.
- ಸರ್ಕಾರಿ ಅಥವಾ ಖಾಸಗಿ (ಶಿಕ್ಷಣ ಇಲಾಖೆಯಿಂದ ಅಂಗೀಕರಿಸಲ್ಪಟ್ಟ) ಶಾಲೆಗಳಲ್ಲಿ 8ನೇ ತರಗತಿ ಪಾಸಾಗಿರಬೇಕು.
- ಬಾಲ ಕಾರ್ಮಿಕಳಾಗಿರಬಾರದು.
- 18 ವರ್ಷ ಪೂರೈಸುವ ಮುನ್ನ ಮದುವೆ ಮಾಡಬಾರದು.
- ಹೆಣ್ಣು ಮಗುವನ್ನು ಲಿಂಗ ಭೇದ ತಾರತಮ್ಯ ಮಾಡದೇ ಸಾಕಬೇಕು.

**ಭಾಗ್ಯಲಕ್ಷ್ಮೀ ಬಾಂಡ್ ಪಡೆದ ಎಲ್ಲಾ ಫಲಾನುಭವಿಯ ಪೋಷಕರಿಗೆ ವಿಮಾ ಸೌಲಭ್ಯ**

- ಫಲಾನುಭವಿ ಮಗುವಿನ ಪೋಷಕರು ಮರಣ ಹೊಂದಿದರೆ ಜೀವ ವಿಮಾ ಸೌಲಭ್ಯವಿದೆ. ಈ ಸೌಲಭ್ಯಕ್ಕೆ ಮೊದಲನೇ ಮಗುವಿನ ನಿಶ್ಚಿತ ಠೇವಣಿಯಲ್ಲಿ ವಾರ್ಷಿಕ 100 ರೂಗಳನ್ನು ಕಡಿತಗೊಳಿಸಲಾಗುವುದು.
- ಮಗುವಿಗೆ 18 ವರ್ಷ ತುಂಬುವ ಮೊದಲು ವಿಮಾದಾರ ಪೋಷಕರು ಅಪಘಾತದಲ್ಲಿ ಮರಣ ಹೊಂದಿದರೆ ರೂ 1,00,000/– ಮರಣ ಪರಿಹಾರ.
- ಅಪಘಾತದಲ್ಲಿ ಪೂರ್ತಿ ಅಂಗವಿಕಲತೆಯಾದರೆ (2 ಕಣ್ಣು, 2 ಕಾಲು, ಅಥವಾ 1 ಕಣ್ಣು, 1 ಕಾಲು) ರೂ. 75,000/– ವಿಮೆಯ ಸುರಕ್ಷತೆ
- ಅಪಘಾತದಲ್ಲಿ ಪಾರ್ಶ್ವ ಅಂಗವಿಕಲತೆ ಹೊಂದಿದರೆ (1 ಕಣ್ಣು, 1 ಕಾಲು) ರೂ. 37,500/– ವಿಮೆಯ ಸುರಕ್ಷತೆ
- ಸಹಜ ಮರಣ ರೂ. 42,500(ಅಪಘಾತವನ್ನು ಹೊರತು ಪಡಿಸಿ)

# ಭಾಗ್ಯಲಕ್ಷ್ಮೀ ಬಾಂಡ್ ಪಡೆದ ಕುಟುಂಬಗಳಿಗೆ ಇರುವ ಸೌಲಭ್ಯಗಳು

| ಕ್ರಸಂ | ವಿಮಾ ಸ್ವರೂಪ ವಿವರ | ದಿನಾಂಕ: 01.04.2006 ರಿಂದ 31.07.2008 ರ ವರೆಗೆ ಜನಿಸಿದ ಫಲಾನುಭವಿಗಳಿಗೆ ದೊರೆಯುವ ಮೊತ್ತ. | | ದಿನಾಂಕ:01.08.2008 ರಿಂದ ಜನಿಸಿದ ಫಲಾನುಭವಿಗಳಿಗೆ ದೊರೆಯುವ ಮೊತ್ತ. | |
|---|---|---|---|---|---|
| 1 | ಅಂದಾಜು ಪರಿಪಕ್ವ ಮೊತ್ತ | ಒಂದನೇ ಮಗು | ಎರಡನೇ ಮಗು | ಒಂದನೇ ಮಗು | ಎರಡನೇ ಮಗು |
| | | 34,751 | 40,619 | 1,00,052 | 1,000,097 |
| 2 | ಆರೋಗ್ಯವಿಮೆ | ಗರಿಷ್ಠ ವಾರ್ಷಿಕ ರೂ25,000.00 | | ಆರೋಗ್ಯ ವಿಮೆ ಸೌಲಭ್ಯವಿರುವುದಿಲ್ಲ | |
| 3 | ಗಳಿಸುವ ಪೋಷಕರು ಅಪಘಾತದಲ್ಲಿ ಪೂರ್ತಿ ಅಂಗವಿಕಲರಾದರೆ-2 ಕಣ್ಣು ಅಥವ 2 ಕಾಲು ಅಥವಾ 1ಕಾಲು ಮತ್ತು 1ಕಣ್ಣು ಅಂಗವಿಕಲವಾದಲ್ಲಿ | 75,000.00 | | 75,000.00 | |
| 4 | ಗಳಿಸುವ ಪೋಷಕರು ಅಪಘಾತದಲ್ಲಿ ಪಾರ್ಶ್ವ ಅಂಗವಿಕಲರಾದರೆ 1ಕಾಲು ಮತ್ತು 1ಕಣ್ಣು ಅಂಗವಿಕಲವಾದಲ್ಲಿ | 37,000.00 | | 37,000.00 | |
| 5 | ಗಳಿಸುವ ಪೋಷಕರು ಅಪಘಾತದಲ್ಲಿ ನಿಧನರಾದರೆ ವಿಮೆಯ ಸುರಕ್ಷತೆ | 1,00,000.00 | | 75,000.00 | |
| 6 | ವಿಮೆಯ ಸುರಕ್ಷತೆ (ಅಪಘಾತವನ್ನು ಬಿಟ್ಟು) ಸಹಜ/ಸ್ವಾಭಾವಿಕ ಸಾವು ಸಂಭವಿಸಿದರೆ | 42,500.00 | | 30,000.00 | |

**ವಿಶೇಷ ಸೂಚನೆ**

ವಿಮಾದಾರ ತಂದೆ ಮರಣ ಹೊಂದಿ ಮರಣ ವಿಮೆಯನ್ನು ಪಡೆದಿದ್ದು ಫಲಾನುಭವಿ ಮಗುವಿಗೆ 18 ವರ್ಷ ಪೂರ್ಣ ಗೊಳ್ಳುವುದಕ್ಕಿಂತ ಮುಂಚಿತವಾಗಿ ತಾಯಿಯು ಮರಣ ಹೊಂದಿದಲ್ಲಿ ಇನ್ನೊಂದು ಬಾರಿ ಮರಣ ವಿಮೆಯನ್ನು ಪಡೆಯಬಹುದಾಗಿದೆ.

**18 ವರ್ಷದ ನಂತರ ಬಾಂಡ್ ಮೊತ್ತವನ್ನು ಪಡೆಯಲು ಇರಬೇಕಾದ ಮಾನದಂಡಗಳು.**

- ಬಿ.ಪಿ.ಎಲ್ ಕಾರ್ಡ್/ಆದ್ಯತಾ ಕುಟುಂಬ ಪಡಿತರ ಚೀಟಿ ಹೊಂದಿರಬೇಕು.
- ಕುಟುಂಬದಲ್ಲಿ ಎರಡು ಮಕ್ಕಳಿಗಿಂತ ಹೆಚ್ಚಿರಬಾರದು.
- ಮಗುವಿನ ತಂದೆ ಅಥವಾ ತಾಯಿ ಯಾರಾದರೊಬ್ಬರು ಶಾಶ್ವತ ಕುಟುಂಬ ಯೋಜನೆಯ ಪದ್ಧತಿಯನ್ನು ಅಳವಡಿಸಿ ಕೊಂಡಿರುವುದರ ಬಗ್ಗೆ (ಮಕ್ಕಳಾಗದಂತೆ ಚಿಕಿತ್ಸೆ ಮಾಡಿಸಿಕೊಂಡಿರಬೇಕು). ಪ್ರಮಾಣ ಪತ್ರದ ದೃಢೀಕೃತ ಪ್ರತಿ ನೀಡುವುದು.
- ಮೊದಲನೆಯ ಹೆರಿಗೆಯಲ್ಲಿ ಒಂದು ಹೆಣ್ಣು ಮಗು ಸೌಲಭ್ಯ ಪಡೆದು ನಂತರ ಎರಡನೇ ಹೆರಿಗೆಯಲ್ಲಿ ಅವಳಿ/ತ್ರಿವಳಿ ಹೆಣ್ಣು ಮಕ್ಕಳು ಜನಿಸಿದಲ್ಲಿ, ಆ ಹೆಣ್ಣು ಮಕ್ಕಳಿಗೂ ಸೌಲಭ್ಯ ನೀಡಲಾಗುವುದು. ಈ ಸೌಲಭ್ಯ 2 ಹೆರಿಗೆಗೆ ಮಾತ್ರ ಮಿತಿಗೊಳಿಸಲಾಗಿದೆ. ಇಂತಹ ಪ್ರಕರಣಗಳಲ್ಲಿ ಮಾತ್ರ ಕುಟುಂಬದ ಮಕ್ಕಳ ಸಂಖ್ಯೆ 2ನ್ನು ಮೀರಿರಬಾರದು ಎಂಬ ನಿಯಮವನ್ನು ಸಡಿಲಿಸಲಾಗಿದೆ.
- ಅಂಗನವಾಡಿ ಕೇಂದ್ರಗಳು ಇಲ್ಲದೆ ಇರುವ ಪ್ರದೇಶಗಳಲ್ಲಿ ವಾಸಿಸುವ ಪೋಷಕರು ತಮ್ಮ ಸಮೀಪದ ಅಂಗನವಾಡಿ ಕೇಂದ್ರಗಳಲ್ಲಿ ನೋಂದಣಿ ಮಾಡುವುದು.
- ಪರಿಪಕ್ವ ಮೊತ್ತವನ್ನು ಪಡೆಯಲು ಫಲಾನುಭವಿ ಮಗು ಕನಿಷ್ಠ 8ನೇ ತರಗತಿಯವರೆಗೆ ವಿದ್ಯಾಭ್ಯಾಸವನ್ನು ಪಡೆದಿರಬೇಕು. ಆದರೆ ವಿಕಲಚೇತನ ಮಕ್ಕಳಿಗೆ ವಿನಾಯಿತಿ ನೀಡಲಾಗಿದ್ದು ಸದರಿ ಮಕ್ಕಳು 1ರಿಂದ 5 ನೇ ತರಗತಿವರೆಗೆ ವ್ಯಾಸಂಗ ಮಾಡಿರಬೇಕು, ಒಂದು ವೇಳೆ ವಿಕಲಚೇತನ ಮಕ್ಕಳು

ತೀವ್ರತರವಾದ ವಿಕಲತೆಯಿಂದ ಬಳಲುತ್ತಿದ್ದಲ್ಲಿ, ಸಂಬಂಧಪಟ್ಟ ಜಿಲ್ಲಾ ಉಪ ನಿರ್ದೇಶಕರು ಪ್ರತೀ ಪ್ರಕರಣಗಳ ಸಾಧಕ ಬಾಧಕಗಳನ್ನು ಪರಿಶೀಲಿಸಿ, ಈ ಷರತ್ತನ್ನು ಸಹ ಸಡಿಲಿಸಲು ಅಧಿಕಾರ ನೀಡಿ ಆದೇಶಿಸಿದೆ. 5ನೇ ಮತ್ತು 8ನೇ ತರಗತಿ ಉತ್ತೀರ್ಣರಾಗಿರುವ ಶಾಲಾ ಮುಖ್ಯೋಪಾಧ್ಯಾಯರಿಂದ ದೃಢಿಕರಣ ಪಡೆದು ಸಲ್ಲಿಸುವುದು

- ಬಾಲ ಕಾರ್ಮಿಕಳಾಗಿರತಕ್ಕದ್ದಲ್ಲ.
- 18 ವರ್ಷ ಪೂರೈಸುವ ಮೊದಲು (ಮದುವೆ) ವಿವಾಹವಾಗಬಾರದು

ಇಂತಹವರ ಮಕ್ಕಳಿಗೆ ಯೋಜನೆಯಡಿ ಅವಕಾಶ ಕಲ್ಪಿಸಲು ಮೇಲಿನ ಪ್ರಾಧಿಕಾರದಿಂದ ಪ್ರಮಾಣ ಪತ್ರ ನೀಡುವುದು ಹಾಗೂ ಈ ಬಗ್ಗೆ ಸ್ವಯಂ ಘೋಷಿತ ಪ್ರಮಾಣ ಪತ್ರ ನೀಡುವವರು ರೂ.20/–ಗಳ ಸ್ಟಾಂಪ್ ಪೇಪರ್‌ನಲ್ಲಿ ನೀಡುವುದು.

- ಎರಡನೇ ಮಗುವನ್ನು ನೋಂದಣಿ ಮಾಡುವ ಸಂದರ್ಭದಲ್ಲಿ ಯೋಜನೆಯಡಿ ನಿಗಧಿಪಡಿಸಿದ ಮೇಲಿನ ಎಲ್ಲಾ ದಾಖಲೆಗಳೊಂದಿಗೆ ಮಗುವಿನ ತಂದೆ ಅಥವಾ ತಾಯಿ ಶಾಶ್ವತ ಕುಟುಂಬ ಯೋಜನೆಯ ಪದ್ಧತಿಯನ್ನು ಅಳವಡಿಸಿಕೊಂಡಿರುವ ಬಗ್ಗೆ ಪ್ರಮಾಣ ಪತ್ರದ ದೃಢೀಕೃತ ಪ್ರತಿ ನೀಡುವುದು.

**ಭಾಗ್ಯಲಕ್ಷ್ಮಿ ಯೋಜನೆಗೆ ಸಂಬಂಧಪಟ್ಟಂತೆ ಅಂಗನವಾಡಿ ಕೇಂದ್ರದಲ್ಲಿ ನಿರ್ವಹಿಸಬೇಕಾದ ದಾಖಲಾತಿಗಳು.**

1. ಯೋಜನೆಯಡಿಯಲ್ಲಿ ನೋಂದಣಿಯಾದ ಹಾಗೂ ಬಾಂಡ್ ಸ್ವೀಕರಿಸಿ ವಿತರಿಸಲಾದ ಫಲಾನುಭಗಳ ವಹಿ
2. ಮರಣ ಹೊಂದಿದ ಫಲಾನುಭವಿಗಳ ದಾಖಲಾತಿ ವಹಿ(ಮೇಲ್ವಿಚಾರಕಿಗೆ ವರದಿ ಮಾಡಿದ ದಿನಾಂಕದೊಂದಿಗೆ)

3. ಪೌಷಕರ ಮರಣ ವಿಮೆ ಪಡೆದಿರುವ ಫಲಾನುಭವಿಗಳ ದಾಖಲಾತಿ ವಹಿ
4. ವಲಸೆ ಹೋಗಿರುವ ಫಲಾನುಭವಿಗಳ ದಾಖಲಾತಿ ವಹಿ
5. ಶಾಲಾ ಪೂರ್ವ ಶಿಕ್ಷಣ ಪಡೆಯಲು ಅಂಗನವಾಡಿ ಯಲ್ಲದೆ ಬೇರೆ ಶಾಲೆಗಳಿಗೆ ದಾಖಲಾದ ವಿವರದ ವಹಿ
6. ಪ್ರತಿ ಮಗುವಿನ ವೈಯಕ್ತಿಕ ಕಡತ(ಎಲ್ಲಾ ಅಗತ್ಯ ದಾಖಲೆಗಳ ಪ್ರತಿ ಹಾಗೂ ಭಾಗ್ಯ ಲಕ್ಷ್ಮಿ ಬಾಂಡ್‌ನ ಪ್ರತಿಯೊಂದಿಗೆ)
7. ತಾಯಂದಿರ ಸಭೆ ನಡವಳಿ ಪುಸ್ತಕ (ತಾಯಂದಿರ ಸಹಿಯೊಂದಿಗೆ)

**ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಿ ನಿರ್ವಹಿಸಬೇಕಾದ ದಾಖಲಾತಿಗಳು**

1. ಯೋಜನೆಯಡಿಯಲ್ಲಿ ನೋಂದಣಿಯಾದ ಹಾಗೂ ಬಾಂಡ್ ವಿತರಿಸಲಾದ ಫಲಾನುಭವಿಗಳ ದಾಖಲಾತಿಗಳ ವಹಿ
2. ಮರಣ ಹೊಂದಿದ ಫಲಾನುಭವಿಗಳ ದಾಖಲಾತಿಗಳ ವಹಿ (ಮೇಲಾಧಿಕಾರಿಗಳಿಗೆ ವರದಿ ಮಾಡಿದ ದಿನಾಂಕದೊಂದಿಗೆ)
3. ಪೋಷಕರ ಮರಣವಿಮೆ ಪಡೆದಿರುವ ಫಲಾನುಭವಿಗಳ ದಾಖಲಾತಿಗಳ ವಹಿ
4. ವಲಸೆ ಹೋಗಿರುವ ಫಲಾನುಭವಿಗಳ ದಾಖಲಾತಿಗಳ ವಹಿ
5. ಪ್ರತಿ ಮಗುವಿನ ವೈಯಕ್ತಿಕ ಕಡತ (ಎಲ್ಲಾ ಅಗತ್ಯ ದಾಖಲೆಗಳ ಪ್ರತಿ ಹಾಗೂ ಭಾಗ್ಯಲಕ್ಷ್ಮಿ ಬಾಂಡ್‌ನ ಪ್ರತಿಯೊಂದಿಗೆ)

## ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಅಂಗನವಾಡಿ ಕಾರ್ಯಕರ್ತೆಯರ ಜವಾಬ್ದಾರಿಗಳು

- ಅರ್ಹ ಕುಟುಂಬದ ಮಹಿಳೆಯರು ಗರ್ಭಿಣಿ ಅಗಿರುವಾಗಲೇ ಭಾಗ್ಯಲಕ್ಷ್ಮೀ ಯೋಜನೆಯ ಸೌಲಭ್ಯದ ಬಗ್ಗೆ ತಾಯಂದಿರ ಸಭೆಯಲ್ಲಿ ಮಾಹಿತಿ ನೀಡುವುದು
- ತನ್ನ ಜನಸಂಖ್ಯಾ ವ್ಯಾಪ್ತಿಯಲ್ಲಿ ಜನಿಸಿದ ಎಲ್ಲಾ ಹೆಣ್ಣು ಮಕ್ಕಳ ಮಾಹಿತಿಯನ್ನು ಸಂಗ್ರಹಿಸಿಡುವುದು.
- ಭಾಗ್ಯಲಕ್ಷ್ಮೀ ಯೋಜನೆಯ ಸೌಲಭ್ಯ ಪಡೆಯಲು ಅರ್ಹರಾಗಿರುವ ಮಕ್ಕಳ ಪೋಷಕರಿಗೆ ಭಾಗ್ಯಲಕ್ಷ್ಮೀ ಅರ್ಜಿಯನ್ನು ನೀಡಿ ಸೂಕ್ತ ದಾಖಲೆಗಳೊಂದಿಗೆ ಅರ್ಜಿ ನಮೂನೆಯನ್ನು ಮಗು ಹುಟ್ಟಿದ ಆರು ತಿಂಗಳ ಒಳಗಾಗಿ ಕೇಂದ್ರಕ್ಕೆ ಸಲ್ಲಿಸುವಂತೆ ತಿಳಿಸುವುದು ಹಾಗೂ ತಿಳಿಸಿರುವುದಕ್ಕೆ ಪೋಷಕರ ಸಹಿ ಪಡೆಯುವುದು.
- ಪೋಷಕರಿಂದ ಪಡೆದ ಅರ್ಜಿಯನ್ನು ಪರಿಶೀಲಿಸಿ ಪೋಷಕರಿಗೆ ಸಹಿಯೊಂದಿಗೆ ಹಿಂಬರಹವನ್ನು ಸ್ವೀಕೃತಿ ನೀಡುವುದು ಹಾಗೂ ಅರ್ಹ ಅರ್ಜಿಯನ್ನು ಮೇಲ್ವಿಚಾರಕರಿಗೆ ಸಲ್ಲಿಸಿ ಸಹಿಯೊಂದಿಗೆ ಹಿಂಬರಹ ಪಡೆಯುವುದು.
- ಯೋಜನೆಯಡಿ ಕಾಲಕಾಲಕ್ಕೆ ಫಲಾನುಭವಿಗಳಿಗೆ ಲಭ್ಯವಿರುವ ಮಧ್ಯಂತರ ಸೌಲಭ್ಯಗಳ ಬಗ್ಗೆ ತಿಳುವಳಿಕೆ ನೀಡುವುದು ಹಾಗೂ ಸೌಲಭ್ಯಗಳನ್ನು ಒದಗಿಸಲು ಸಕಾಲದಲ್ಲಿ ಪೋಷಕರಿಂದ ಅರ್ಜಿ ಹಾಗೂ ಇನ್ನಿತರ ಅಗತ್ಯ ದಾಖಲಾತಿಗಳನ್ನು ಪಡೆದು ಮೇಲ್ವಿಚಾರಕಿಗೆ ಸಲ್ಲಿಸುವುದು.
- ಯೋಜನೆಯ ಸಮಗ್ರ ಷರತ್ತು ನಿಬಂಧನೆಗಳ ಬಗ್ಗೆ ಪ್ರತಿ ಪೋಷಕರಿಗೆ ವ್ಯಾಪಕ ತಿಳುವಳಿಕೆ ನೀಡುವುದು.
- ಯೋಜನೆಯ ಬಗ್ಗೆ ಗ್ರಾಮ ಸಭೆ, ತಾಯಂದಿರ ಸಭೆ, ಸ್ವಸಹಾಯ ಸಂಘಗಳ ಸಭೆ ಮತ್ತು ಇತರೆ ಸಭೆಗಳಲ್ಲಿ ವ್ಯಾಪಕ ಪ್ರಚಾರ ಮಾಡುವುದು.

- ಭಾಗ್ಯಲಕ್ಷ್ಮಿ ಯೋಜನೆಯ ಅರ್ಜಿ ನಮೂನೆಯನ್ನು ಭರ್ತಿ ಮಾಡುವ ಬಗ್ಗೆ ಪೋಷಕರಿಗೆ ತರಬೇತಿ ನೀಡುವುದು.

## ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಮೇಲ್ವಿಚಾರಕಿ ಜವಾಬ್ದಾರಿಗಳು

- ತನ್ನ ವ್ಯಾಪ್ತಿಯ ಅಂಗನವಾಡಿ ಕಾರ್ಯಕರ್ತೆಯರು ಎಲ್ಲಾ ಅರ್ಹ ಮಕ್ಕಳ ಅರ್ಜಿ ಸ್ವೀಕರಿಸಿರುವುದನ್ನು ಮೇಲ್ವಿಚಾರಣೆ ಮಾಡುವುದು.
- ಅಂಗನವಾಡಿ ಕಾರ್ಯಕರ್ತೆಯಿಂದ ಸಕಾಲದಲ್ಲಿ ಅರ್ಜಿಗಳನ್ನು ಸ್ವೀಕರಿಸಿ ಕಾರ್ಯಕರ್ತೆಗೆ ಧೃಢಿಕರಿಸಿದ ಸ್ವೀಕೃತಿಯನ್ನು ನೀಡುವುದು.
- ಅಂಗನವಾಡಿ ಕಾರ್ಯಕರ್ತೆಯರಿಂದ ಪಡೆದ ಅರ್ಜಿಯನ್ನು ಪರಿಶೀಲಿಸಿ ಅರ್ಹ ಅರ್ಜಿಯಾಗಿದಲ್ಲಿ ಮಗುವಿಗೆ ಒಂದು ವರ್ಷ ಪೂರ್ಣಗೊಳ್ಳುವುದಕ್ಕಿಂತ ಮುಂಚಿತವಾಗಿ ತಂತ್ರಾಂಶದಲ್ಲಿ ನೋಂದಣಿ ಮಾಡಿ ಬಾಂಡ್ ಐಡಿ ಸಂಖ್ಯೆಯನ್ನು ಪಡೆದುಕೊಳ್ಳುವುದು.
- ಆಗಿಂದಾಗೆ ಸದರಿ ಐಡಿ ಸಂಖ್ಯೆ ಬಗ್ಗೆ ತಂತ್ರಾಂಶದಲ್ಲಿ ಪರಿಶೀಲಿಸಿ ಮಂಜೂರಾತಿ ಬಗ್ಗೆ ಖಚಿತಪಡಿಸಿಕೊಳ್ಳುವುದು.
- ಅಂಗನವಾಡಿಗೆ ಭೇಟಿ ನೀಡಿದಾಗ ದಾಖಲಾತಿಗಳ ನಿರ್ವಹಣೆ ಬಗ್ಗೆ ಮೇಲ್ವಿಚಾರಣೆ ಮಾಡುವುದು.
- ಯೋಜನೆಯಡಿ ಫಲಾನುಭವಿಗೆ ಒದಗಿಸಬೇಕಾದ ಸೌಲಭ್ಯಗಳು, ಮಧ್ಯಂತರ ಸವಲತ್ತುಗಳ ಬಗ್ಗೆ ಮೇಲ್ವಿಚಾರಣೆ ಮಾಡುವುದು.
- ವೃತ್ತ ಸಭೆಗಳಲ್ಲಿ ಯೋಜನೆಯ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದು.

- ಗ್ರಾಮ ಮತ್ತು ಹೋಬಳಿ ಮಟ್ಟದ ಸಭೆ ಹಾಗೂ ಇತರೆ ಸಭೆಗಳಲ್ಲಿ ಹೆಚ್ಚಿನ ಮಾಹಿತಿ ನೀಡಿ ಪ್ರಚಾರ ನೀಡುವುದು.
- ಯೋಜನೆಯ ಬಗ್ಗೆ ತಾಯಂದಿರಿಗೆ ತರಬೇತಿ ನೀಡುವುದು.

**ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಜವಾಬ್ದಾರಿಗಳು**

- ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲಾತಿಗಳನ್ನು ಪರಿಶೀಲಿಸಿ ಮೇಲ್ವಿಚಾರಕಿಯು ಆನ್‌ಲೈನ್‌ನಲ್ಲಿ ನೋಂದಣಿ ಮಾಡಿರುವ ಮಾಹಿತಿಯೊಂದಿಗೆ ತಾಳೆ ಮಾಡುವುದು.
- ಪೋಷಕರು ಅರ್ಜಿಯೊಂದಿಗೆ ಸಲ್ಲಿಸಿರುವ ಬಿಪಿಎಲ್ ಕಾರ್ಡ್‌ನ್ನು ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ತಂತ್ರಾಂಶದ ಆನ್‌ಲೈನ್‌ನೊಂದಿಗೆ ತಾಳೆ ಮಾಡಿ ಖಚಿತಪಡಿಸಿಕೊಳ್ಳುವುದು.
- ಒಂದೇ ಮಗುವಿನ ಹೆಸರು ಎರಡು ಭಾರಿ ಆನ್‌ಲೈನ್‌ನಲ್ಲಿ ನೋಂದಣಿಯಾಗದಂತೆ ಪರಿಶೀಲಿಸಿ ಶಿಫಾರಸ್ಸು ಮಾಡುವುದು.
- ಯೋಜನೆಯಲ್ಲಿ ಸ್ವೀಕೃತವಾದ ಎಲ್ಲಾ ಅರ್ಜಿಗಳು ತಂತ್ರಾಂಶದಲ್ಲಿ ದಾಖಲಾಗಿರುವ ಬಗ್ಗೆ ಖಚಿತ ಪಡಿಸಿಕೊಳ್ಳುವುದು.
- ನೋಂದಣಿಯಾದ ಎಲ್ಲಾ ಅರ್ಹ ಅರ್ಜಿಗಳನ್ನು ಸಕಾಲದಲ್ಲಿ ಉಪ ನಿರ್ದೇಶಕರಿಗೆ ಶಿಫಾರಸ್ಸು ಮಾಡಿ ಕಳುಹಿಸುವುದು.
- ಮಧ್ಯಂತರ ಸೌಲಭ್ಯ ಪಡೆಯಲು ಅರ್ಹರಾಗಿರುವ ಎಲ್ಲಾ ಫಲಾನುಭವಿಗಳಿಗೆ ಸದರಿ ಸೌಲಭ್ಯವನ್ನು ಒದಗಿಸುವುದು, ಈ ಬಗ್ಗೆ ತಂತ್ರಾಂಶದಲ್ಲಿ ಪರಿಶೀಲಿಸಿ ನೋಂದಣಿಯಾಗಿರುವ ಎಲ್ಲಾ ಪ್ರಕರಣಗಳಿಗೂ ಸಂಬಂಧಪಟ್ಟಂತೆ ಅಗತ್ಯ ದಾಖಲಾತಿ ಗಳನ್ನು ಪಡೆದು ಉಪನಿರ್ದೇಶಕರಿಗೆ ಶಿಫಾರಸ್ಸು ಮಾಡುವುದು.

- ಪಾಲುದಾರ ಹಣಕಾಸು ಸಂಸ್ಥೆಯಿಂದ ಸ್ವೀಕೃತವಾದ ಭಾಗ್ಯಲಕ್ಷ್ಮಿ ಬಾಂಡ್‌ಗಳನ್ನು ಸಕಾಲದಲ್ಲಿ ಫಲಾನುಭವಿಗಳಿಗೆ ವಿತರಿಸುವುದು.
- ಭಾಗ್ಯಲಕ್ಷ್ಮಿ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ರಚಿಸಲಾದ ತಾಲ್ಲೂಕು ಮಟ್ಟದ ಕಾರ್ಯಪಡೆಯ ಸಭೆಯನ್ನು ಪ್ರತಿ ಮೂರು ತಿಂಗಳಿಗೊಮ್ಮೆ ನಡೆಸುವುದು ಹಾಗೂ ಯೋಜನೆಯ ಪರಿಣಾಮಕಾರಿ ಅನುಷ್ಠಾನದ ಬಗ್ಗೆ ಚರ್ಚಿಸುವುದು.
- ಫಲಾನುಭವಿ ಮಗು ಮರಣ ಹೊಂದಿದಲ್ಲಿ ಸದರಿ ಮಗುವಿನ ಸೌಲಭ್ಯವನ್ನು ರದ್ದುಗೊಳಿಸುವ ಬಗ್ಗೆ ತುರ್ತಾಗಿ ಕ್ರಮ ಕೈಗೊಳ್ಳಬೇಕು.
- ಫಲಾನುಭವಿ ಪೋಷಕರು ಯೋಜನೆಯ ಮಾನ ದಂಡಗಳನ್ನು ಪಾಲಿಸದೆ ಇದ್ದಲ್ಲಿ ಸೌಲಭ್ಯವನ್ನು ರದ್ದುಗೊಳಿಸಲು ಕ್ರಮಕೈಗೊಳ್ಳುವುದು.
- ಪರಿಪಕ್ವ ಮೊತ್ತ ಪಡೆಯಲು ಅರ್ಹರಾಗಿರುವ ಫಲಾನುಭವಿಗಳ ಮಾಹಿತಿಯನ್ನು ಕೂಲಂಕುಶವಾಗಿ ಪರಿಶೀಲಿಸಿ ಪ್ರಸ್ತಾವನೆಯನ್ನು ಅನುಮೋದನೆಗಾಗಿ ಉಪ ನಿರ್ದೇಶಕರಿಗೆ ಸಲ್ಲಿಸುವುದು.
- ಯೋಜನೆ ಕುರಿತಂತೆ ಹೆಚ್ಚಿನ ಪ್ರಚಾರ ಹಾಗೂ ತರಬೇತಿಯನ್ನು ನೀಡುವುದು.
- ದ್ವಿಗುಣ ಬಾಂಡ್ ಸ್ವೀಕೃತಿಯಾಗಿದಲ್ಲಿ ಸದರಿ ಬಾಂಡ್‌ಗಳನ್ನು ತಕ್ಷಣ ಪಾಲುದಾರ ಹಣಕಾಸು ಸಂಸ್ಥೆಗೆ ಹಿಂದಿರುಗಿಸುವುದು ಹಾಗೂ ನಿರ್ದೇಶನಾಲಯಕ್ಕೆ ವರದಿ ಮಾಡುವುದು.

## ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಜಿಲ್ಲಾ ಉಪ ನಿರ್ದೇಶಕರ ಜವಾಬ್ದಾರಿಗಳು

- ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲಾತಿಗಳನ್ನು ಪರಿಶೀಲಿಸಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಆನ್‌ಲೈನ್‌ನಲ್ಲಿ ಶಿಫಾರಸ್ಸು ಮಾಡಿರುವ ಮಾಹಿತಿಯೊಂದಿಗೆ ತಾಳೆ ಮಾಡುವುದು.
- ಪೋಷಕರು ಅರ್ಜಿಯೊಂದಿಗೆ ಸಲ್ಲಿಸಿರುವ ಬಿಪಿಎಲ್ ಕಾರ್ಡ್‌ನ್ನು ಆಹಾರ ಮತ್ತು ನಾಗರಿಕ ಸರಬಾರಾಜು ಇಲಾಖೆಯ ತಂತ್ರಾಂಶದ ಆನ್‌ಲೈನ್‌ನೊಂದಿಗೆ ತಾಳೆ ಮಾಡಿ ಖಚಿತ ಪಡಿಸಿಕೊಳ್ಳುವುದು.
- ಒಂದೇ ಮಗುವಿನ ಹೆಸರು ಎರಡು ಬಾರಿ ಆನ್‌ಲೈನ್‌ನಲ್ಲಿ ನೊಂದಣಿಯಾಗದಂತೆ ಪರಿಶೀಲಿಶಿ ಮಂಜೂರಾತಿ ನೀಡುವುದು.
- ತಂತ್ರಾಂಶದ ಮೂಲಕ ಉಪ ನಿರ್ದೇಶಕರ ಹಂತಕ್ಕೆ ಬಂದಿರುವ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ನಿಯಮಾನುಸಾರ ಸಕಾಲದಲ್ಲಿ ಮಂಜೂರಾತಿ ನೀಡುವುದು.
- ಮಧ್ಯಂತರ ಸೌಲಭ್ಯ ಪಡೆಯಲು ತಾಲ್ಲೂಕುಗಳಿಂದ ಸ್ವೀಕೃತವಾದ ಅರ್ಜಿಗಳನ್ನು ಪಾಲುದಾರ ಹಣಕಾಸು ಸಂಸ್ಥೆಗೆ ಕಳುಹಿಸಿಕೊಡುವುದು ಹಾಗೂ ಮಧ್ಯಂತರ ಸೌಲಭ್ಯವನ್ನು ಫಲಾನುಭವಿಗಳಿಗೆ ಒದಗಿಸುವುದು.
- ಪಾಲುದಾರ ಹಣಕಾಸು ಸಂಸ್ಥೆಯಿಂದ ಸ್ವೀಕೃತವಾದ ಭಾಗ್ಯಲಕ್ಷ್ಮಿ ಬಾಂಡ್‌ಗಳನ್ನು ಸೂಕ್ತ ಸಮಯದಲ್ಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ನೀಡುವುದು. ಈ ಬಗ್ಗೆ ತಂತ್ರಾಂಶದಲ್ಲಿ ಪರಿಶೀಲಿಸಿ ವಿವಿಧ ಹಂತಗಳಲ್ಲಿ ಬಾಕಿಯಿರುವ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಮಂಜೂರಾತಿ ನೀಡಲು ಸೂಕ್ತ ಕ್ರಮ ತೆಗೆದುಕೊಳ್ಳುವುದು.

- ಭಾಗ್ಯಲಕ್ಷ್ಮಿ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ರಚಿಸಲಾದ ಜಿಲ್ಲಾ ಮಟ್ಟದ ಕಾರ್ಯಪಡೆಯ ಸಭೆಯನ್ನು ಪ್ರತಿ ಮೂರು ತಿಂಗಳಿಗೊಮ್ಮೆ ನಡೆಸುವುದು ಹಾಗೂ ಯೋಜನೆಯ ಪರಿಣಾಮಕಾರಿ ಅನುಷ್ಠಾನದ ಬಗ್ಗೆ ಚರ್ಚಿಸಿ ಸಮಸ್ಯೆ ಪರಿಹರಿಸಲು ಕ್ರಮ ಕೈಗೊಳ್ಳುವುದು.
- ವರ್ಷದ ಪ್ರಾರಂಭದಲ್ಲಿ ತಪ್ಪದೆ ಲೆಕ್ಕ ಮರು ಹೊಂದಾಣಿಕೆ ಮಾಡುವುದು.
- ಯೋಜನೆಯ ಬಗ್ಗೆ ಯೋಜನಾಧಿಕಾರಿಗಳಿಗೆ ಹಾಗೂ ಮೇಲ್ವಿಚಾರಕಿಯರಿಗೆ ಸೂಕ್ತ ತರಬೇತಿ ನೀಡುವುದು.
- ಫಲಾನುಭವಿಯ ಸಮರ್ಪಕ ಆಯ್ಕೆ ದಾಖಲೆಯನ್ನು ಖಚಿತ ಪಡೆಸುವುದು, ದಾಖಲೆಯ ಸಮಯದಲ್ಲಿ ಹೆಣ್ಣು ಮಗು ಮೊದಲನೆಯದೆ ಎರಡನೆಯದೆ ಎಂಬುವುದನ್ನು ಸಮರ್ಪಕ ವಾಗಿ ಪರಿಶೀಲಿಸುವುದು. ಯಾವುದೇ ದೋಶಪೂರಿತ/ ಅಪೂರ್ಣಗೊಂಡ/ ಅನರ್ಹ ಅರ್ಜಿಗಳು ಕಂಡುಬಂದಲ್ಲಿ ಅವುಗಳನ್ನು ತಿರಸ್ಕರಿಸುವುದು.
- ಭಾಗ್ಯಲಕ್ಷ್ಮಿ ಅರ್ಜಿಯನ್ನು ಯಾವುದೇ ವಿಳಂಬಕ್ಕೆ ಆಸ್ಪದ ಕೊಡದೆ ಸಕಾಲದಲ್ಲಿ ನೋಂದಣಿ ಮಾಡುವುದು ಇಲಾಖೆಯ ಜವಾಬ್ದಾರಿಯಾಗಿರುತ್ತದೆ. ತಪ್ಪು ಮಾಹಿತಿ ನೀಡಿದ, ಅದಕ್ಕೆ ಆಸ್ಪದ ನೀಡಿದ ಅಥವಾ ವಿಳಂಬಕ್ಕೆ ಕಾರಣರಾದ ಅಂಗನವಾಡಿ ಕಾರ್ಯಕರ್ತೆ / ಮೇಲ್ವಿಚಾರಕಿ / ಸಿಬ್ಬಂಧಿ / ಅಧಿಕಾರಿಗಳ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಕೈಗೊಳ್ಳುವುದು.

### ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ನಿರ್ದೇಶನಾಲಯದ ಜವಾಬ್ದಾರಿಗಳು

- ತಂತ್ರಾಂಶದಲ್ಲಿ ನೋಂದಣಿಯಾದ ಫಲಾನುಭವಿಗಳ ಅನುಗುಣವಾಗಿ ಅನುದಾನ ಬಿಡುಗಡೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

- ಬಿಡುಗಡೆಯಾದ ಅನುದಾನಕ್ಕೆ ಅನುಗುಣವಾಗಿ ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ಫಲಾನುಭವಿಗಳಿಗೆ ಮಂಜೂರಾತಿ ನೀಡಿ ಅನುದಾನವನ್ನು ಪಾಲುದಾರ ಹಣಕಾಸು ಸಂಸ್ಥೆಗೆ ಬಿಡುಗಡೆ ಮಾಡುವುದು.
- ಬಿಡುಗಡೆಯಾದ ಅನುದಾನಕ್ಕೆ ಪಾಲುದಾರ ಹಣಕಾಸು ಸಂಸ್ಥೆಯಿಂದ ಪ್ರಮಾಣ ಪತ್ರವನ್ನು ಪಡೆಯುವುದು.
- ಪ್ರತಿ ಆರ್ಥಿಕ ವರ್ಷದ ಕೊನೆಯಲ್ಲಿ ಜಿಲ್ಲೆ ಹಾಗು ಹಣಕಾಸು ಸಂಸ್ಥೆಯೊಂದಿಗೆ ಭೌತಿಕ ಮತ್ತು ಆರ್ಥಿಕ ಲೆಕ್ಕ ಹೊಂದಣಿಕೆ ಮಾಡಿಕೊಳ್ಳುವುದು.
- ಭಾಗ್ಯಲಕ್ಷ್ಮಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಅಗತ್ಯವಿದ್ದಲ್ಲಿ ತಂತ್ರಾಂಶವನ್ನು ಅವಶ್ಯಕತೆಗನುಗುಣವಾಗಿ ನವೀಕರಿಸುವುದು.
- ಯೋಜನೆಯ ಬಗ್ಗೆ ಉಪ ನಿರ್ದೇಶಕರು ಮತ್ತು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಸೂಕ್ತ ತರಬೇತಿ ನೀಡುವುದು.
- ಯೋಜನೆಯ ಕುರಿತಂತೆ ವ್ಯಾಪಕ ಪ್ರಚಾರ ನೀಡುವುದು.
- ಕಾಲ ಕಾಲಕ್ಕೆ ಉಪ ನಿರ್ದೇಶಕರುಗಳಿಗೆ ಸೂಕ್ತ ನಿರ್ದೇಶನವನ್ನು ನೀಡುವುದು.

### ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಪೋಷಕರ ಜವಾಬ್ದಾರಿಗಳು

- ಸಕಾಲದಲ್ಲಿ ಭಾಗ್ಯಲಕ್ಷ್ಮಿ ಅರ್ಜಿಯನ್ನು ನಮೂನೆ 1 ರಲ್ಲಿ ಭರ್ತಿ ಮಾಡಿ ಹಾಗೂ ನಮೂನೆ 2 ರಲ್ಲಿ ಮುಚ್ಚಳಿಕೆ ಪ್ರಮಾಣ ಪತ್ರವನ್ನು ಸೂಕ್ತ ದಾಖಲೆಗಳೊಂದಿಗೆ ಅಂಗನವಾಡಿ ಕಾರ್ಯಕರ್ತೆಗೆ ಸಲ್ಲಿಸುವುದು ಹಾಗೂ ಸಲ್ಲಿಸಿರುವುದಕ್ಕೆ ಸಹಿಯೊಂದಿಗೆ (ರಶೀದಿ) ಸ್ವೀಕೃತಿ ಪಡೆಯುವುದು.

- ಅರ್ಜಿಯಲ್ಲಿ ಹೆಸರನ್ನು ನಮೂದಿಸುವಾಗ ಮಗುವಿನ ಜನನ ಪ್ರಮಾಣ ಪತ್ರದಲ್ಲಿ ಇರುವ ಹೆಸರನ್ನೆ ನಮೂದಿಸುವುದು.
- ಬಾಂಡ್‌ನ್ನು ಸುರಕ್ಷಿತವಾಗಿ ಇಡುವುದು ಹಾಗೂ ಯೋಜನೆಯ ಎಲ್ಲಾ ಮಾನದಂಡಗಳನ್ನು ಕಡ್ಡಾಯವಾಗಿ ಪಾಲಿಸುವುದು.
- ಫಲಾನುಭವಿ ಮಗುವಿಗೆ ಉತ್ತಮ ಶಿಕ್ಷಣವನ್ನು ನೀಡುವುದು.
- ಹೆಣ್ಣು ಮಗುವನ್ನು ಲಿಂಗಭೇದ ತಾರತಮ್ಯ ಮಾಡದೆ ಸಾಕಬೇಕು.
- ಫಲಾನುಭವಿ ಮಗುವನ್ನು ಬಾಲ ಕಾರ್ಮಿಕತೆ/ ಬಾಲ್ಯ ವಿವಾಹವಾಗದಂತೆ ರಕ್ಷಿಸುವುದು.
- ಖಾಯಂ ವಿಳಾಸ ಬದಲಾವಣೆಯಾದಲ್ಲಿ ಹೊಸ ವಿಳಾಸದ ಬಗ್ಗೆ ಮಾಹಿತಿಯನ್ನು ಸಂಬಂದಪಟ್ಟ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ತಪ್ಪದೆ ನೀಡುವುದು.
- ಒಂದು ವೇಳೆ ಪಲಾನುಭವಿ ಮಗು ಮರಣ ಹೊಂದಿದಲ್ಲಿ ಬಾಂಡನ್ನು ಅಂಗನವಾಡಿ ಕಾರ್ಯಕರ್ತೆ/ಶಿಶು ಅಭಿವೃದ್ಧಿ ಯೋಜನಾದಿಕಾರಿಗಳಿಗೆ ಹಿಂದಿರುಗಿಸಿ ಸ್ವಿಕೃತಿ ಪಡೆಯುವುದು.
- ಮಧ್ಯಂತರ ಸೌಲಭ್ಯ ಅಥವಾ ಪರಿಪಕ್ವ ಮೊತ್ತ ಪಡೆಯುವ ಸಂದರ್ಭದಲ್ಲಿ ಮಾತ್ರ ಮಗು ಮತ್ತು ಮಗುವಿನ ತಾಯಿ ಹೆಸರಿನಲ್ಲಿ ಜಂಟಿ ಖಾತೆ ತೆರೆಯುವುದು.

### ಭಾಗ್ಯಲಕ್ಷ್ಮೀ ಯೋಜನೆಗೆ ಸಂಬಂಧಪಟ್ಟಂತೆ ಪೋಷಕರ ಹೆಸರು ಬದಲಾವಣೆ.

ಫಲಾನುಭವಿ ಮಗು ನೋಂದಣಿ ಸಂದರ್ಭದಲ್ಲಿ ನೀಡಿರುವ ಭಾಗ್ಯಲಕ್ಷ್ಮಿ ಅರ್ಜಿ ಹಾಗೂ ಜನನ ಪ್ರಮಾಣ ಪತ್ರದಲ್ಲಿ ನೀಡಿರುವ ಹೆಸರಿನಂತೆ ಬಾಂಡನ್ನು ಮುದ್ರಿಸಲಾಗುವುದು. ಪರಿಪಕ್ವ ಮೊತ್ತ

ಪಡೆಯುವವರೆಗೆ ಸದರಿ ಹೆಸರನ್ನು ಬದಲಾವಣೆ ಮಾಡಲು ಅವಕಾಶ ಇರುವುದಿಲ್ಲ. ಫಲಾನುಭವಿ ಮಗುವನ್ನು ಕಾನೂನು ಪ್ರಕಾರ ದತ್ತು ನೀಡಿದಲ್ಲಿ ಹಾಗೂ ದತ್ತು ಪೋಷಕರು ಭಾಗ್ಯಲಕ್ಷ್ಮಿ ಯೋಜನೆಯ ಮಾನದಂಡದ ಪ್ರಕಾರ ಸೌಲಭ್ಯ ಪಡೆಯಲು ಅರ್ಹರಾಗಿದಲ್ಲಿ ಮಾತ್ರ ಯಾವುದೇ ಕಾರಣಕ್ಕೂ ಫಲಾನುಭವಿ ಮಗುವಿನ ಹೆಸರನ್ನು ಬದಲಾಯಿಸಲು ಅವಕಾಶವಿರುವುದಿಲ್ಲ.

**ಬಾಂಡ್ ಕಳೆದುಹೊದಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳು :-**

ಭಾಗ್ಯಲಕ್ಷ್ಮಿ ಬಾಂಡನ್ನು ಸುರಕ್ಷಿತವಾಗಿ ಸಂರಕ್ಷಿಸುವುದು ಫಲಾನುಭವಿ ಪೋಷಕರ ಜವಾಬ್ದಾರಿಯಾಗಿದೆ ಒಂದು ವೇಳೆ ಆಕಸ್ಮಿಕವಾಗಿ ಬಾಂಡ್‌ಗಳು ಕಳೆದುಹೊದಲ್ಲಿ ಹೊಸ ಬಾಂಡ್‌ಗಳನ್ನು ಮುದ್ರಿಸಲು ಅವಕಾಶವಿರುವುದಿಲ್ಲ.

ಬಾಂಡ್ ಕಳೆದುಹೋದ ತಕ್ಷಣ ಬಾಂಡ್ ಕಳೆದುಹೋಗಿರುವ ಬಗ್ಗೆ ಸಮೀಪದ ಪೋಲಿಸ್ ಠಾಣೆಯಲ್ಲಿ ದೂರು ದಾಖಲಿಸುವುದು. ದೂರಿನ ಪ್ರತಿ ಮತ್ತು ಕಳೆದುಹೋದ ಬಾಂಡ್‌ನ ಜೆರಾಕ್ಸ್ ಪ್ರತಿಯನ್ನು ಶಿಶು ಅಭಿವೃದ್ದಿ ಯೋಜನಾಧಿಕಾರಿಗಳಿಂದ ಧೃಡಿಕರಿಸಿ ಇಟ್ಟುಕೊಳ್ಳುವುದು. ಪರಿಪಕ್ವ ಮೊತ್ತ ಪಡೆಯುವ ಸಂದರ್ಭದಲ್ಲಿ ಅದನ್ನು ಒದಗಿಸುವುದು.

**ಪರಿಪಕ್ವ ಮೊತ್ತ ಪಡೆಯಲು ಸಲ್ಲಿಸಬೇಕಾದ ದಾಖಲಾತಿಗಳು**

- ಮೂಲ ಭಾಗ್ಯಲಕ್ಷ್ಮಿ ಬಾಂಡ್
- ಒಂದು ವೇಳೆ ಬಾಂಡ್ ಕಳೆದು ಹೋಗಿದ್ದಲ್ಲಿ ಬಾಂಡ್‌ನ ದೃಢೀಕೃತ ಜೆರಾಕ್ಸ್ ಪ್ರತಿ ಹಾಗು ದೂರಿನ ಪ್ರತಿ.
- 8ನೇ ತರಗತಿ ಉತ್ತೀರ್ಣರಾಗಿರುವ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಯರಿಂದ ಪಡೆದ ಧೃಡಿಕರಣ ಪ್ರತಿ (ವಿಕಲಚೇತನ ಫಲಾನುಭವಿಯಾಗಿದಲ್ಲಿ 5ನೇ ತರಗತಿ ಉತೀರ್ಣರಾಗಿರುವ ಬಗ್ಗೆ ಧೃಡಿಕರಣ ಪ್ರತಿ).

- ಭಾಗ್ಯಲಕ್ಷ್ಮಿ ಯೋಜನೆಯ ಎಲ್ಲಾ ಮಾನದಂಡಗಳನ್ನು ಪಾಲಿಸಿರುವ ಬಗ್ಗೆ ಶಿಶು ಅಭಿವೃದ್ದಿ ಯೋಜನಾಧಿಕಾರಿಗಳಿಂದ ಪಡೆದ ದೃಢೀಕರನ ಪ್ರತಿ.

**ಯಾವ ಸಂದರ್ಭದಲ್ಲಿ ಬಾಂಡ್ ರದ್ದುಗೊಳಿಸುವುದು ?**

ಪೋಷಕರು ಯೋಜನೆಯ ಈ ಕೆಳಗಿನ ಮಾನದಂಡಗಳನ್ನು ಉಲ್ಲಂಘಿಸಿದಲ್ಲಿ

- ಕುಟುಂದಲ್ಲಿ ಮಕ್ಕಳ ಸಂಖ್ಯೆ 2 ನ್ನು ಮೀರುವುದು
- ಫಲಾನುಭವಿ ಮಗು ಬಾಲ ಕಾರ್ಮಿಕಳಾದಲ್ಲಿ/ ಬಾಲ್ಯ ವಿವಾಹವಾದಲ್ಲಿ
- ಮಗು ಮರಣ ಹೊಂದಿದಲ್ಲಿ
- ಸುಳ್ಳು ದಾಖಲಾತಿಗಳನ್ನು ಒದಗಿಸಿ ಬಾಂಡ್ ಪಡೆದಿದಲ್ಲಿ
- ನೋಂದಣಿ ಸಮಯದಲ್ಲಿ ಸುಳ್ಳು ಮಾಹಿತಿ ನೀಡಿದಲ್ಲಿ ಶಿಶು ಅಭಿವೃದ್ದಿ ಯೋಜನಾಧಿಕಾರಿಗಳು ಬಾಂಡ್ ರದ್ದು ಗೊಳಿಸಲು ತಪ್ಪದೆ ಕ್ರಮ ವಹಿಸುವುದು.

## ರಾಜ್ಯ ಸರ್ಕಾರದ ಇತರೆ ಇಲಾಖೆಗಳ ಜವಾಬ್ದಾರಿಗಳು

### ನಗರಾಭಿವೃದ್ಧಿ ಇಲಾಖೆ

- ರಾಜ್ಯದ ಮಹಾನಗರ ಪಾಲಿಕೆ/ ನಗರ ಸಭೆ ವ್ಯಾಪ್ತಿಯ ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳಲ್ಲಿ ಜನಿಸುವ ಹೆಣ್ಣು ಮಕ್ಕಳನ್ನು ಗುರುತಿಸಲು ಸಹಾಯ ಮಾಡುವುದು.
- ಈ ಯೋಜನೆಯಡಿ ಫಲಾನುಭವಿಗಳನ್ನು ನೋಂದಾಯಿಸಲು ಅರ್ಜಿಗಳನ್ನು ಪಡೆದು ಪರಿಶೀಲಿಸಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ದಿ ಇಲಾಖಾ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಗೆ ರವಾನಿಸುವುದು.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

- ಅಂಗನವಾಡಿ ಕೇಂದ್ರಗಳು ಇಲ್ಲದ ಸ್ಥಳಗಳಲ್ಲಿ ಗ್ರಾಮೀಣ ಪ್ರದೇಶ/ಗುಡ್ಡಗಾಡು ಪ್ರದೇಗಳಲ್ಲಿ ಭಾಗ್ಯಲಕ್ಷ್ಮಿ ಯೋಜನೆಗೆ ಅರ್ಹ ಫಲಾನುಭವಿಗಳು ಲಭ್ಯವಿದ್ದಲ್ಲಿ ಗುರುತಿಸಿ ಸಮೀಪದ ಅಂಗನವಾಡಿ ಕೇಂದ್ರಗಳಲ್ಲಿ ಅರ್ಜಿ ಸಲ್ಲಿಸಿ ನೊಂದಾಯಿಸಲು ಕ್ರಮ ವಹಿಸುವುದು.
- ಈ ಕುಟುಂಬಗಳಿಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಿವಿಧ ಅಭಿವೃದ್ದಿ ಕಾರ್ಯಕ್ರಮಗಳಲ್ಲಿ ಸೌಲಭ್ಯ ನೀಡಲು ಆಧ್ಯತೆ ನೀಡುವುದು.
- ಭಾಗ್ಯಲಕ್ಷ್ಮಿ ಯೋಜನೆ ಬಗ್ಗೆ ವ್ಯಾಪಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿ ಕೊಳ್ಳವುದು.

## ಆರೋಗ್ಯ ಇಲಾಖೆ

- ಗರ್ಭಿಣಿಯರನ್ನು ನೊಂದಾಯಿಸುವಾಗಲೇ ಹೆಣ್ಣು ಮಗು ಜನಿಸಿದಲ್ಲಿ ಭಾಗ್ಯಲಕ್ಷ್ಮಿ ಯೋಜನೆಯ ಮಾಹಿತಿ ನೀಡುವುದು.
- ಜನನಿ ಸುರಕ್ಷ ಹಾಗೂ ಇತರೆ ಯೋಜನೆಯಡಿ ಸೌಲಭ್ಯ ನೀಡುವ ಎಲ್ಲಾ ಅರ್ಹ ಫಲಾನುಭವಿಗಳನ್ನು ಭಾಗ್ಯಲಕ್ಷ್ಮಿ ಯೋಜನೆಯ ಸೌಲಭ್ಯ ಪಡೆಯಲು ಪ್ರೇರೇಪಿಸುವುದು.
- ಹೆಣ್ಣು ಮಗುವಿನ ಚುಚ್ಚುಮದ್ದಿನ ಬಗ್ಗೆ ಹಾಗೂ ಜನನ ದಿಂದ 18 ವರ್ಷಗಳವರೆಗೆ ಮಗುವಿನ ಆರೋಗ್ಯದ ಬಗ್ಗೆ ಉಸ್ತುವರಿ ಮಾಡುವುದು.
- ಭಾಗ್ಯಲಕ್ಷ್ಮಿ ಫಲಾನುಭವಿ ಮತ್ತು ಫಲಾನುಭವಿಯ ತಂದೆ-ತಾಯಿಂಯರಿಗೆ ಆರೋಗ್ಯ ವಿಮೆ ಸೌಲಭ್ಯಗಳನ್ನು ಅನುಷ್ಠಾನಗೊಳಿಸುವುದು.

**ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ**

- ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಸಕಾಲಾದಲ್ಲಿ ಗುರುತಿಸಿ ಬಿಪಿಎಲ್ ಕಾರ್ಡ್/ಆದ್ಯತಾ ಕುಟುಂಬ ಪಡಿತರ ಚೀಟಿಯನ್ನು ಶೀಘ್ರವಾಗಿ ವಿತರಿಸಲು ಕ್ರಮ ಕೈಗೊಳ್ಳುವುದು.
- ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಅರ್ಹ ಪೋಷಕರಿಗೆ ನಿಗಧಿತ ಸಮಯದಲ್ಲಿ ನಾಶವಾಗದಂತಹ ಬಿಪಿಎಲ್ ಕಾರ್ಡ್/ಆದ್ಯತಾ ಕುಟುಂಬ ಪಡಿತರ ಚೀಟಿಯನ್ನು ವಿತರಿಸುವುದು.

**ಶಿಕ್ಷಣ ಇಲಾಖೆ ಜವಾಬ್ದಾರಿಗಳು.**

- ಫಲಾನುಭವಿ ಮಗು ಶಾಲೆಗೆ ದಾಖಲಾಗಿರುವ ಬಗ್ಗೆ ಶಾಲಾ ದಾಖಲಾತಿ ಸಂಖ್ಯೆ (ಹೆಜ್ಜೆ ಗುರುತು ಸಂಖ್ಯೆ) ಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಒದಗಿಸುವುದು ಹಾಗೂ ಚೈಲ್ಡ್ ಟ್ರ್ಯಾಕಿಂಗ್‌ಗೆ ಸಹಕರಿಸುವುದು.
- ಫಲಾನುಭವಿ ಮಗು 5ನೇ ತರಗತಿ 8ನೇ ತರಗತಿ ಹಾಗೂ 10ನೇ ತರಗತಿ ಉತ್ತೀರ್ಣರಾಗಿರುವ ಬಗ್ಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಮಹಿತಿ ನೀಡುವುದು.
- ಯಾವುದೇ ಹಂತದಲ್ಲಿ ಮಗು ಶಾಲೆಯಿಂದ ಹೋರಗುಳಿದಲ್ಲಿ ಸದರಿ ಮಾಹಿತಿಯುನ್ನು ಕೂಡಲೇ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗಳ ಗಮನಕ್ಕೆ ತರುವುದು ಹಾಗೂ ಮಗುವನ್ನು ಶಾಲೆಗೆ ಮತ್ತೆ ದಾಖಲಿಸಲು ಕ್ರಮಕೈಗೊಳ್ಳುವುದು.

ವಿ.ಸೂಚನೆ:- ಮಕ್ಕಳನ್ನು ದತ್ತು ಪಡೆದಿರುವ ಕುಟುಂಬಗಳ ಬಿ.ಪಿ.ಎಲ್ ಕಾರ್ಡ್‌ದಾರರಾಗಿದ್ದು, ಯೋಜನೆಗೆ ಅರ್ಹರಾಗಿದ್ದಲ್ಲಿ, ಸದರಿ ಮಕ್ಕಳನ್ನು ಶಾಲೆಗೆ ಸೇರಿಸಲು ಮತ್ತು ಮಗುವಿಗೆ ಪರಿಪಕ್ವ ಮೊತ್ತವನ್ನು ಪಡೆಯಲು ಅನುಕೂಲವಾಗುವಂತೆ ಭಾಗ್ಯಲಕ್ಷ್ಮಿ ಬಾಂಡಿನಲ್ಲಿ ಮೂಲ ಪೋಷಕರ ಹೆಸರುಗಳ ಬದಲಾಗಿ ದತ್ತು ಪೋಷಕರ ಹೆಸರುಗಳನ್ನು ಅಳವಡಿಸಿ ಬದಲಾವಣೆ ಮಾಡಬಹುದಾಗಿದೆ.

## ಫ್ಲೋ ಚಾರ್ಟ್

### ಭಾಗ್ಯಲಕ್ಷ್ಮಿ ಯೋಜನೆಯಲ್ಲಿ ಫಲಾನುಭವಿಗಳನ್ನು ಗುರುತಿಸಿ ಆರ್ಥಿಕ ಸಂಸ್ಥೆಯಲ್ಲಿ ಠೇವಣಿ ಇಡಲು ನಿಧಿಸಿರುವ ಕಾಲವಕಾಶ

| ವಿವರ | ಕಾಲವಕಾಶ |
|---|---|
| ಅಂಗನವಾಡಿ ಕಾರ್ಯಕರ್ತೆ ಹೆಣ್ಣು ಮಗುವನ್ನು ಗುರುತಿಸಿ ತಂದೆ/ತಾಯಿಯಿಂದ ಅರ್ಜಿಯನ್ನು ಜನನ ಪ್ರಮಾಣ ಪತ್ರದೊಂದಿಗೆ ಸ್ವೀಕರಿಸಿ, ದಾಖಲೆಗಳನ್ನು ಪರಿಶೀಲಿಸಿ, ಮೇಲ್ವಿಚಾರಣೆಗೆ ಸಲ್ಲಿಸಲು | 6 ತಿಂಗಳು |
| ಮೇಲ್ವಿಚಾರಕಿ ಅರ್ಜಿಗಳನ್ನು ಪರಿಶೀಲಿಸಿ ತಂತ್ರಾಂಶದಲ್ಲಿ ನೋಂದಣಿ ಮಾಡಿ ಬಾಂಡ್ ಐಡಿ ಸಂಖ್ಯೆ ಪಡೆಯುವುದು. | 2ತಿಂಗಳು |
| ಶಿಶು ಅಭಿವೃದ್ಧಿ ಯೋಜನಾಧಿಕಾರಿ ದಾಖಲೆಗಳನ್ನು ಪರಿಶೀಲಿಸಿ, ಉಪ ನಿದೆ ೯ಶಕರಿಗೆ ಮಂಜುರಾತಿಗಾಗಿ ಪ್ರಸ್ತಾವನೆ ಸಲ್ಲಿಸಿಲು ಹಾಗೂ ಆನ್‌ಲೈನ್ ಮಂಜುರಾತಿ ನೀಡಲು | 15 ದಿನ |
| ಉಪ ನಿರ್ದೇಶಕರು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಂದ ಸ್ವೀಕರಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಆನ್‌ಲೈನ್ ಮೂಲಕ ಮಂಜುರಾತಿ ನೀಡುವುದು. | 15 ದಿನ |
| ನಿರ್ದೇಶಕರು ಸರ್ಕಾರದಿಂದ ಬಿಡುಗಡೆಯಾದ ಅನುದಾನಕ್ಕೆ ಅನುಸಾರವಾಗಿ ಅನುಮೋದಿಸಿ ಪಾಲುದಾರ ಹಣಕಾಸು ಸಂಸ್ಥೆಗೆ ಕಳುಹಿಸವುದು. | - |
| ಪಾಲುದಾರ ಹಣಕಾಸು ಸಂಸ್ಥೆಯು ನಿರ್ದೇಶನಾಲಯದಿಂದ ಅನುದಾನ ಮತ್ತು ಮಾಹಿತಿ ಸ್ವೀಕೃತವಾದ ಒಂದು ತಿಂಗಳಲ್ಲಿ ಬಾಂಡ್‌ಗಳನ್ನು ಮುದ್ರಿಸಿ ಜಿಲ್ಲೆಗಳಿಗೆ ವಿತರಿಸುವುದು. | 30 ದಿನ |

## ಅನುಬಂಧ-2

# ಆರೋಗ್ಯ ವಿಮೆ ಪಡೆಯುವ ವಿಧಾನ

- 01-04-2006 ರಿಂದ 31-07-2008 ವರೆಗೆ ಜನಿಸಿದ ಯೋಜನೆಯಡಿ ನೋಂದಣಿಯಾದ ಮಕ್ಕಳಿಗೆ ಆರೋಗ್ಯ ವಿಮೆ ಸೌಲಭ್ಯವನ್ನು ಕಲ್ಪಿಸಲಾಗಿದೆ.
- ಆರೋಗ್ಯ ವಿಮೆ ಸೌಲಭ್ಯ ಪಡೆಯಲು ಮಗು ಕನಿಷ್ಠ 24 ಗಂಟೆ ಆಸ್ಪತ್ರೆಯಲ್ಲಿ ದಾಖಲಾಗಿ ಚಿಕಿತ್ಸೆ ಪಡೆದಿರಬೇಕು.
- ನಿಗಧಿತ ನಮೂನೆಯ ಅರ್ಜಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಿಂದ ಪಡೆಯಬೇಕು.
- ಭಾಗ್ಯಲಕ್ಷ್ಮಿ ಬಾಂಡ್‌ನ ಜೆರಾಕ್ಸ್ ಪ್ರತಿಯನ್ನು ಲಗತ್ತಿಸಬೇಕು.
- ಚಿಕಿತ್ಸೆ ಪಡೆದ ಬಗ್ಗೆ ಆಸ್ಪತ್ರೆಯ ಮೂಲ ಬಿಲ್ಲು ಹಾಗೂ ರಶೀದಿಯನ್ನು ಲಗತ್ತಿಸಬೇಕು.
- ಆಸ್ಪತ್ರೆಯಿಂದ ಬಿಡುಡೆಯಾದ ಬಗ್ಗೆ ಡಿಸ್ಚಾರ್ಜ್ ಸಮ್ಮರಿ ಲಗತ್ತಿಸಬೇಕು.

ಮೇಲಿನ ಎಲ್ಲಾ ದಾಖಲಾತಿಗಳೊಂದಿಗೆ ಅರ್ಜಿಯನ್ನು ಚಿಕಿತ್ಸೆ ಪಡೆದ ನಂತರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಸಲ್ಲಿಸಬೇಕು ದಾಖಲಾತಿಗಳೊಂದಿಗೆ ಸಲ್ಲಿಸಿದ ಅರ್ಜಿಗಳನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಪರಿಶೀಲಿಸಿ ಧೃಡೀಕರಿಸಿ ಭಾರತೀಯ ಜೀವ ವಿಮಾ ನಿಗಮಕ್ಕೆ ಕಳುಹಿಸಿಕೊಡಬೇಕು.

## ಪ್ರತಿ ಮಗುವಿನ ಬೆಳವಣಿಗೆಯ ಮೇಲ್ವಿಚಾರಣೆ ಚಾರ್ಟ್ ದಾಖಲೆ

ಪ್ರತಿ ಮಗುವನ್ನು ತೂಕ ಮಾಡಿ ಮಗುವಿನ ತೂಕವನ್ನು ಚಾರ್ಟ್‌ನಲ್ಲಿ ದಾಖಲಿಸುವುದು. ತೀವ್ರ ಅಪೌಷ್ಟಿಕತೆಯಲ್ಲಿರುವ ಮಕ್ಕಳ ಬಗ್ಗೆ ವೈದ್ಯರಿಗೆ ತಿಳಿಸುವುದು(ಚಾರ್ಟ್‌ನ ಮಾದರಿ ಮುಂದಿನ ಪುಟದಲ್ಲಿ)

CH-135

# ಮಗು ಬೆಳವಣಿಗೆಯ ಮೆ




Ensure equal care for the girl child

ಅನುಬಂಧ–3

# ಪೋಷಕರು ವಿಮೆ ಸೌಲಭ್ಯವನ್ನು ಪಡೆಯಲು ಅರ್ಜಿ ಸಲ್ಲಿಸುವ ವಿಧಾನ

1. ವಿಮಾದಾರ ಪೋಷಕರು ಮರಣ ಹೊಂದಿದಾಗ ಮಾತ್ರ ವಿಮೆ ಸೌಲಭ್ಯಕ್ಕೆ ಅವಕಾಶವಿರುತ್ತದೆ.
2. ವಿಮೆ ಸೌಲಭ್ಯ ಪಡೆಯಲು ಅರ್ಜಿ ನಮೂನೆಯನ್ನು ಸಂಭಂಧಪಟ್ಟ ಶಿಶು ಅಭಿವೃದ್ಧಿ ಯೋಜನೆಗಳಿಂದ ಪಡೆಯಬೇಕು.

**ಅರ್ಜಿಯ ಜೊತೆಗೆ ಈ ಕೆಳಗಿನ ದಾಖಲಾತಿಗಳನ್ನು ಲಗತ್ತಿಸಬೇಕು.**

- ಮರಣ ದೃಢೀಕರಣದ ಮೂಲ ಪ್ರತಿ ಮತ್ತು ಜೆರಾಕ್ಸ್ ಪ್ರತಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಂದ ದೃಢೀಕರಿಸಿ ಸಲ್ಲಿಸಬೇಕು.
- ಮೂಲ ಬಾಂಡ್‌ನಲ್ಲಿ ಆಂಗ್ಲ ಭಾಷೆಯಲ್ಲಿ ಮುದ್ರಿತವಾಗಿರುವ ಬಾಗವನ್ನು ಕತ್ತರಿಸಿ ಅರ್ಜಿಯೊಂದಿಗೆ ಲಗತ್ತಸಬೇಕು.
- ವಯಸ್ಸಿನ ದೃಢೀಕರಣಕ್ಕಾಗಿ ಶಾಲಾ ಪ್ರಮಾಣ ಪತ್ರ (ಟಿ.ಸಿ/ಮಾರ್ಕ್ಸ್ ಕಾರ್ಡ್) ಮತದಾರರ ಗುರುತುನ ಚೀಟಿ/ಪಟ್ಟಿ, ಪಡಿತರ ಚೀಟಿ ಒದಗಿಸಬೇಕು.
- ಮಗು ತಾಯಿ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಜಂಟಿ ಖಾತೆ ತೆರೆದು, ಬ್ಯಾಂಕ್ ಪಾಸ್ ಪುಸ್ತಕ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

ಘಟನೆ ನಡೆದ ನಂತರ ಸಕಾಲದಲ್ಲಿ ಮೇಲಿನ ಎಲ್ಲಾ ದಾಖಲಾತಿಗಳನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಮುಖಾಂತರ ಭಾರತೀಯ ಜೀವ ವಿಮಾ ನಿಗಮಕ್ಕೆ ತಲುಪಿಸಬೇಕು. ಅಪಘಾತದಲ್ಲಿ ಮರಣ ಹೊಂದಿದ ಸಂದರ್ಭದಲ್ಲಿ ಮೇಲಿನ ಎಲ್ಲಾ ದಾಖಲಾತಿಗಳ ಜೊತೆ ಈ ಕೆಳಗಿನ ದಾಖಲೆಗಳನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿ ಹಾಗೂ ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳಿಂದ ದೃಢೀಕರಿಸಿ ಒದಗಿಸಬೇಕು.

- ಪ್ರಥಮ ಮಾಹಿತಿ ವರದಿ (ಎಫ್ಐಆರ್)
- ಪೊಲೀಸ್ ಇನಕ್ವೆಸ್ಟ್ ರಿಪೋರ್ಟ್ (ಪಿಐಆರ್)
- ಪೋಸ್ಟ್ ಮಾರ್ಟಮ್ ರಿಪೋರ್ಟ್ (ಪಿಎಂಆರ್)

ವಿಮಾದಾರ ಪೋಷಕರ ಅಪಘಾತ/ಮರಣಕ್ಕೆ ಸಂಬಂಧಿಸಿದಂತೆ ಕೋರ್ಟ್‌ನಲ್ಲಿ ಕೇಸ್ ನಡೆಯುತ್ತಿದ್ದರೆ ಕೇಸ್ ನಂಬರ್ ನಮೂದಿಸಿ ಅರ್ಜಿ ಸಲ್ಲಿಸಲು ಅವಕಾಶವಿದ್ದು, ಇಂತಹ ಸಂದರ್ಭದಲ್ಲಿ ಪ್ರಥಮ ಹಂತದಲ್ಲಿ ಸಹಜ ಮರಣಕ್ಕೆ ನೀಡುವ ವಿಮಾ ಮೊತ್ತವನ್ನು ನೀಡಲಾಗುತ್ತದೆ. ಕೋರ್ಟ್ ಕೇಸ್ ಇತ್ಯಾರ್ಥಗೊಂಡ ನಂತರ ವರದಿಯನ್ನು ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಮುಖಾಂತರ ಭಾರತೀಯ ಜೀವ ವಿಮಾ ನಿಗಮಕ್ಕೆ ಕಳುಹಿಸಿ ಪೂರ್ಣ ವಿಮಾ ಮೊತ್ತವನ್ನು ನಾಮಿನಿಯು ಪಡೆಯಬಹುದಾಗಿದೆ.

194



**ಕರ್ನಾಟಕ ಸರ್ಕಾರ**

ಸಂಖ್ಯೆ:ಮಮಅಇ/ಮಕ/ಉನಿ/ಪವ್ಯ-16/2011-12

ಆಯುಕ್ತರ ಕಛೇರಿ.
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
1ನೇ ಮಹಡಿ, ಬಹುಮಹಡಿ ಕಟ್ಟಡ,
ಡಾ॥ ಅಂಬೇಡ್ಕರ್ ವೀಧಿ, ಬೆಂಗಳೂರು-1,
ದಿನಾಂಕ:08.11.2012

**ಅತಿ ಜರೂರು**

ಉಪ ನಿರ್ದೇಶಕರು,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
30 ಜಿಲ್ಲೆಗಳು.

ಮಾನ್ಯರೇ,

ವಿಷಯ: ಭಾಗ್ಯಲಕ್ಷ್ಮಿ ಬಾಂಡ್ ವಿತರಿಸಲು ಹಣ ಪಡೆಯಲಾಗುತ್ತಿದೆ ಎಂಬ ದೂರಿನ ಬಗ್ಗೆ.
ಉಲ್ಲೇಖ: ಈ ಕಛೇರಿಯ ಅ.ಸ ಪತ್ರ ಸಂಖ್ಯೆ:ಮಮಅಇ/ಮಕ/ಭಾಯೋ/ದೂರು-35 2009-10
ದಿನಾಂಕ:24.07.2010

*****

ಭಾಗ್ಯಲಕ್ಷ್ಮಿ ಯೋಜನೆಯಡಿ ಬಾಂಡ್‌ಗಳನ್ನು ಫಲಾನುಭವಿಗಳಿಗೆ ವಿಳಂಬವಾಗಿ ವಿತರಣೆಯಾದಲ್ಲಿ ಅಥವಾ ವಿತರಿಸದೇ ಇದ್ದಲ್ಲಿ ಹಾಗೂ ಬಾಂಡ್ ವಿತರಣೆಯಲ್ಲಿ ಕಛೇರಿ ಸಿಬ್ಬಂದಿಯಾಗಲಿ ಅಥವಾ ಮಧ್ಯವರ್ತಿಗಳಿಂದಾಗಲಿ ಲಂಚ ಪಡೆದ ಬಗ್ಗೆ ದೂರುಗಳು ಕಂಡು ಬಂದಲ್ಲಿ ಇದಕ್ಕೆ ಸಂಬಂಧ ಪಟ್ಟ ಉಪ ನಿರ್ದೇಶಕರನ್ನೇ ಹೊಣೆಗಾರರನ್ನಾಗಿ ಮಾಡಿ ನಿಮ್ಮ ಕರ್ತವ್ಯ ನಿರ್ಲಕ್ಷ್ಯತೆ ಬಗ್ಗೆ ಸೂಕ್ತ ಕ್ರಮವನ್ನು ಜರುಗಿಸಲಾಗುವುದೆಂದು ಉಲ್ಲೇಖಿದ ಅರೆ ಸರ್ಕಾರಿ ಪತ್ರದಲ್ಲಿ ಸೂಚಿಸಲಾಗಿತ್ತು.

ಆದರೆ ಭಾಗ್ಯಲಕ್ಷ್ಮಿ ಬಾಂಡ್ ನೀಡುವ ಸಂದರ್ಭದಲ್ಲಿ ಅಂಗನವಾಡಿ ಕಾರ್ಯಕರ್ತೆಯರು ಫಲಾನುಭವಿಗಳಿಂದ ಹಣ ಪಡೆಯುತ್ತಿದ್ದಾರೆ ಎಂದು ಜನ ಪ್ರತಿನಿಧಿಗಳು ದೂರವಾಣಿ ಮೂಲಕ ಪದೇ ಪದೇ ದೂರು ಸಲ್ಲಿಸುತ್ತಿದ್ದಾರೆ. ಈ ವಿಷಯ ದಿನಾಂಕ:11.10.2012ರಂದು ಮಾನ್ಯ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಎಂಪಿಆರ್ ಸಭೆಯಲ್ಲೂ ಪ್ರಸ್ತಾಪವಾಗಿದ್ದೂ ಇದನ್ನು ಗಂಭೀರ ವಿಷಯವೆಂದು ಪರಿಗಣಿಸಲಾಗಿದ್ದು, ಈ ಪದ್ಧತಿಯನ್ನು ತಡೆ ಹಿಡಿಯಲು ಜಿಲ್ಲಾ ಉಪ ನಿರ್ದೇಶಕರುಗಳಿಗೆ ಸೂಚನೆ ನೀಡುವಂತೆ ಎಂಪಿಆರ್ ಸಭೆಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಇನ್ನು ಮುಂದೆ ಭಾಗ್ಯಲಕ್ಷ್ಮಿ ಬಾಂಡ್‌ಗಳು ಎಲ್‌ಐಸಿಯಿಂದ ಸ್ವೀಕೃತವಾದ ತಕ್ಷಣ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಾಗಲಿ, ಮೇಲ್ವಿಚಾರಕಿಯರಲ್ಲಾಗಲಿ ಅಥವಾ ಅಂಗನವಾಡಿ ಕಾರ್ಯಕರ್ತೆಯರಲ್ಲಾಗಲೀ ಬಾಂಡ್‌ಗಳನ್ನು ತಡೆಹಿಡಿಯದೆ ಆದಷ್ಟು ಶೀಘ್ರವಾಗಿ ಫಲಾನುಭವಿಗಳಿಗೆ ತಲುಪಿಸುವ ಬಗ್ಗೆ ಸೂಕ್ತ ಕ್ರಮ ತೆಗೆದು ಕೊಳ್ಳುವುದು ಒಂದು ವೇಳೆ ಬಾಂಡ್ ನೀಡುವಾಗ ಅಂಗನವಾಡಿ ಕಾರ್ಯಕರ್ತೆ ಅಥವಾ ಮೇಲ್ವಿಚಾರಕಿಯರು ಲಂಚ ಪಡೆದ ಪ್ರಕರಣಗಳು ಕಂಡು ಬಂದಲ್ಲಿ ಕೂಡಲೇ ಸಂಬಂಧ ಪಟ್ಟ ಅಂಗನವಾಡಿ ಕಾರ್ಯಕರ್ತೆ ಅಥವಾ ಮೇಲ್ವಿಚಾರಕಿಯರ ವಿರುದ್ಧ ಶಿಸ್ತಿನ ಕ್ರಮ ಕೈಗೊಂಡು ಪ್ರಧಾನ ಕಛೇರಿಗೆ ವರದಿ ಮಾಡುವುದು.

ತಮ್ಮ ನಂಬುಗೆಯ,

ಆಯುಕ್ತರ ಪರವಾಗಿ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.
ಬೆಂಗಳೂರು.

ಆಯುಕ್ತರು ಇವರಿಂದ ಅನುಮೋದಿಸಲ್ಪಟ್ಟಿದೆ

9-11-12

ಕರ್ನಾಟಕ ಸರ್ಕಾರ

ಸಂ:ಉಪನಿ:ಬೆಂನ:ಬೆಂ(ನ):ಐಸಿಡಿ–2:ಭಾಯೋ:7::2013–2014/936

ಉಪ ನಿರ್ದೇಶಕರ ಕಛೇರಿ
ಸುಧಾರಣಾ ಸಂಸ್ಥೆಗಳ ಸಂಕೀರ್ಣ
ಡಾ:ಎಂ.ಹೆಚ್. ಮರಿಗೌಡ ರಸ್ತೆ
(ಹೊಸೂರು ರಸ್ತೆ), ಬೆಂಗಳೂರು–29
ದಿನಾಂಕ:01–08–2014

ಉಪ ನಿರ್ದೇಶಕರು
ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ
ಜಿಲ್ಲಾಧಿಕಾರಿಗಳ ಕಛೇರಿ
ಬೆಂಗಳೂರು.

ಮಾನ್ಯರೆ,

ವಿಷಯ:- ಬಿ.ಪಿ.ಎಲ್.ಕಾರ್ಡ್ ವಿತರಣೆಯಲ್ಲಿ ವಿಳಂಬವಾಗುತ್ತಿರುವ ಬಗ್ಗೆ.

ಉಲ್ಲೇಖ:- ಕಾರ್ಯಕ್ರಮ ಸಂಯೋಜಕರು, ಸಿವಿಕ್ (CIVIC) ಸಂಸ್ಥೆ, ಬೆಂಗಳೂರು ಇವರ ಪತ್ರದ ದಿನಾಂಕ:28–07–2014.

– – –

ಮೇಲ್ಕಾಣಿಸಿದ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಪತ್ರದಲ್ಲಿ ಭಾಗ್ಯಲಕ್ಷ್ಮಿ ಯೋಜನೆಯಡಿ ಹೆಣ್ಣು ಮಕ್ಕಳನ್ನು ನೊಂದಣಿ ಮಾಡಲು ಬಹುತೇಕ ಜನರಿಗೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಬಿ.ಪಿ.ಎಲ್.ಕಾರ್ಡ್ ವಿತರಿಸದಿರುವ ಬಗ್ಗೆ ಭಾಗ್ಯಲಕ್ಷ್ಮಿ ಯೋಜನೆಗೆ ಮಗುವನ್ನು ನೊಂದಣಿ ಮಾಡುವಲ್ಲಿ ವಿಳಂಬವಾಗುತ್ತಿರುವುದಾಗಿ ತಿಳಿಸುತ್ತಾ ಈ ಸಮಸ್ಯೆ ನಿವಾರಿಸುವಂತೆ ಕಾರ್ಯಕ್ರಮ ಸಂಯೋಜಕರು, ಸಿವಿಕ್ ಸಂಸ್ಥೆ, ಬೆಂಗಳೂರು ಇವರು ಕೋರಿರುತ್ತಾರೆ.

ಭಾಗ್ಯಲಕ್ಷ್ಮಿ ಯೋಜನೆಯಡಿ ಬಿ.ಪಿ.ಎಲ್ ಕುಟುಂಬದ ಹೆಣ್ಣು ಮಕ್ಕಳಿಗೆ ಒಂದು ವರ್ಷ ಅವಧಿಯೊಳಗೆ ಅರ್ಜಿ ಸಲ್ಲಿಸಲು ಮಾನದಂಡ ನಿಗದಿಪಡಿಸಲಾಗಿರುತ್ತದೆ. ಆದರೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯಿಂದ ಬಿ.ಪಿ.ಎಲ್. ಕಾರ್ಡ್ ವಿತರಣಾ ಪ್ರಕ್ರಿಯೆ ವಿಳಂಬವಾಗುತ್ತಿರುವುದರಿಂದ, ಅರ್ಹ ಫಲಾನುಭವಿಗಳು ಭಾಗ್ಯಲಕ್ಷ್ಮಿ ಯೋಜನೆಯಡಿ ಸೌಲಭ್ಯ ಪಡೆಯಲು ನೊಂದಣಿ ಮಾಡಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ಅರ್ಹ ಫಲಾನುಭವಿಗಳು ಯೋಜನೆಯ ಸೌಲಭ್ಯದಿಂದ ವಂಚಿತರಾಗುತ್ತಿದ್ದು, ಯೋಜನೆಯ ಪ್ರಗತಿಯಲ್ಲಿ ಕುಂಠಿತವಾಗಿರುತ್ತದೆ. ಆದ್ದರಿಂದ ಭಾಗ್ಯಲಕ್ಷ್ಮಿ ಯೋಜನೆಯಡಿ ಪೂರ್ಣ ಪ್ರಮಾಣದಲ್ಲಿ ಪ್ರಗತಿ ಸಾಧಿಸಲು ಅನುಕೂಲವಾಗುವಂತೆ ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ಅರ್ಹ ಕುಟುಂಬಗಳಿಗೆ ಆದ್ಯತೆ ಮೇರೆಗೆ ಬಿ.ಪಿ.ಎಲ್.ಕಾರ್ಡ್ ವಿತರಿಸುವ ಬಗ್ಗೆ ತಾಲ್ಲೂಕು ತಹಸೀಲ್ದಾರರುಗಳಿಗೆ (ಬೆಂಗಳೂರು ಉತ್ತರ/ಉತ್ತರ

SM:Champa:kan.let.

(ಅಪರ)/ದಕ್ಷಿಣ/ಪೂರ್ವ/ಆನೇಕಲ್ ಇವರುಗಳಿಗೆ ಸೂಕ್ತ ನಿರ್ದೇಶನ ನೀಡುವಂತೆ ಕೋರಲಾಗಿದೆ. ಅಂತೆಯೇ ಉಪ ನಿರ್ದೇಶಕರು, ಪೂರ್ವ/ಪಶ್ಚಿಮ/ದಕ್ಷಿಣ/ಉತ್ತರ/ಕೇಂದ್ರವಲಯಗಳ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರುಗಳಿಗೆ ಆದ್ಯತೆ ಮೇರೆಗೆ ಬಿ.ಪಿ.ಎಲ್.ಕಾರ್ಡ್ ವಿತರಿಸುವಂತೆ ಸೂಚಿಸಲು ಕೋರಲಾಗಿದೆ.

ತಮ್ಮ ವಿಶ್ವಾಸಿ,

ಉಪ ನಿರ್ದೇಶಕರು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಬೆಂಗಳೂರು ನಗರ ಜಿಲ್ಲೆ.

ಪ್ರತಿಯನ್ನು:-

1) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಬೆಂಗಳೂರು ಇವರಿಗೆ ಗೌರವಪೂರ್ವಕವಾಗಿ ಮಾಹಿತಿಗಾಗಿ ಹಾಗೂ ಸೂಕ್ತ ಕ್ರಮಕ್ಕಾಗಿ ಸಲ್ಲಿಸಿದೆ.
2) ಸಿವಿಕ್ (CIVIC) ಸಂಸ್ಥೆ, ಬೆಂಗಳೂರು #6 2ನೇ ಮಹಡಿ, ಕಸ್ತೂರಿ ಅಪಾರ್ಟ್‌ಮೆಂಟ್, 35/23 ಲಾಂಗ್ ಫೋರ್ಡ್ ರೋಡ್ ಕ್ರಾಸ್, ಶಾಂತಿನಗರ, ಬೆಂಗಳೂರು–560025.

## ನಮೂನೆ -1

## ಬಾಗ್ಯಲಕ್ಷ್ಮಿ ಯೋಜನೆ ನೋಂದಣಿ ಅರ್ಜಿ

(ಈ ಅರ್ಜಿಯನ್ನು ಅಂಗನ್ನವಾಡಿಯಲ್ಲಿ ಉಚಿತವಾಗಿ ನೀಡಲಾತ್ತದೆ)

ಪೋಷಕ ರೊಂದಿಗೆ ಮಗುವಿನ ಭಾವಚಿತ್ರ

| | | |
|---|---|---|
| 1 | ಮಗುವಿನ ಹೆಸರು (ಅವಳಿ ಮಗುವಾಗಿದ್ದಲ್ಲಿ ಮೊದಲನೇ ಅವಳಿ/ಎರಡನೇ ಅವಳಿ ಮಗು ಎಂದು ನಮೂದಿಸುವುದು) | |
| 2 | ಜನನ ಪ್ರಮಾಣ ಪತ್ರದಂತೆ ಜನ್ಮ ದಿನಾಂಕ(ಮಹಾನಗರ) | |
| 3 | ತಾಯಿಯ ಹೆಸರು | |
| 4 | ತಂದೆ ಹೆಸರು | |
| 5 | ವಿಳಾಸ | |
| 6 | (ಅ) ತಾಯಿಯ ಉದ್ಯೋಗ<br>(ಆ) ತಂದೆಯ ಉದ್ಯೋಗ | |
| 7 | (ಅ)ಕುಟುಂಬದಲ್ಲಿರುವ ಮಕ್ಕಳ ಸಂಖ್ಯೆ<br>(ಆ)ಈಗ ಸೌಲಭ್ಯ ಪಡೆಯುತ್ತಿರುವ ಹೆಣ್ಣು ಮಗು ಕುಟುಂಬದಲ್ಲಿ ಎಷ್ಟನೆಯದು ?<br>(ಇ) ಸೌಲಭ್ಯಕ್ಕೆ ಎಷ್ಟನೆಯದು ? | |
| 8 | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ /ಅಲ್ಪಸಂಖ್ಯಾತರು ಆಗಿದ್ದಲ್ಲಿ ಜಾತಿ ಪ್ರಮಾಣಪತ್ರ ಸಲ್ಲಿಸುವುದು | |
| 9 | ಬಡತನ ರೇಖೆಗಿಂತ ಕೆಳಗಿನ ಕುಟುಂಬದ (ಬಿ.ಪಿ.ಎಲ್) ಪಡಿತರ ಚೀಟಿ/ಆದ್ಯತಾ ಕುಟುಂಬದ ಪಡಿತರ ಚೀಟಿಯ ಪ್ರತಿಯನ್ನು ಲಗತ್ತಿಸುವುದು | |
| 10 | ಆದ್ಯತೆಯ ಮೇರೆಗೆ ಮಗುವಿನ ಆಧಾರ್ ಗುರುತಿನ ಚೀಟಿ ಸಂಖ್ಯೆ/ವಾಸಸ್ಥಳ ದೃಢೀಕರಣ ಪತ್ರ | |

ನಾನು ಮೇಲೆ ನೀಡಿರುವ ಮಾಹಿತಿಯು ಸತ್ಯವಾಗಿದೆಯೆಂದು ಇದರಲ್ಲಿ ಏನೇ ಲೋಪ ಕುಟುಂಬದಲ್ಲಿ ಇಲಾಖೆಯು ಕೈಗೊಳ್ಳುವ ಕ್ರಮಕ್ಕೆ ಬದ್ದನಾಗಿರುತ್ತೇನೆಂದು ದೃಢೀಕರಿಸುತ್ತೇನೆ

ಸ್ಥಳ:– ಅರ್ಜಿದಾರರ ಸಹಿ

ದಿನಾಂಕ:– (ಮಗುವಿನ ತಾಯಿ/ತಂದೆ /ಪೋಷಕರು)

**ಈ ಕೆಳಕಂಡ ಸ್ವೀಕೃತಿಯನ್ನು ಅಂಗನವಾಡಿ ಕಾರ್ಯಕರ್ತೆಯು ಕತ್ತರಿಸಿ ಅರ್ಜಿದಾರರಿಗೆ ನೀಡಬೇಕು.**

.............................. ✂ ...............ಇಲ್ಲಿಗೆ ಕತ್ತರಿಸಿ .......................... ✂ ........................

### ಸ್ವೀಕೃತಿ

ಶ್ರೀಮತಿ ........................... ಕೋಂ................ಇವರ ಮಗಳು ಕುಮಾರಿ ................ರವರ ಬಾಗ್ಯಲಕ್ಷ್ಮಿ ಯೋಜನೆಯ ಅರ್ಜಿಯನ್ನು ದಿನಾಂಕ .........................ರಂದು ಸ್ವೀಕರಿಸಲಾಗಿದೆ.

ಸ್ಥಳ: ಅಂಗನವಾಡಿ ಕಾರ್ಯಕರ್ತೆಯ ಹೆಸರು, ಸಹಿ

ದಿನಾಂಕ : ಅಂಗನವಾಡಿ ಕೇಂದ್ರ/ವೃತ್ತದ ಹೆಸರು.......................

ತಾಲ್ಲೂಕು/ಜಿಲ್ಲೆಯ ಹೆಸರು ...................

ನಮೂನೆ –2

## ಮುಚ್ಚಳಿಕೆ ಪ್ರಮಾಣ ಪತ್ರ ಭಾಗ್ಯಲಕ್ಷ್ಮಿ ಯೋಜನೆಯಡಿ ಸೌಲಭ್ಯ ಪಡೆಯಲು

ಶ್ರಿ ________ ತಂದೆ/ಶ್ರೀಮತಿ ________ ಎಂಬ ಹೆಸರಿನ ತಂದೆ/ತಾಯಿಯಾದ ನಾನು/ನಾವು, ನಮಗೆ ದಿನಾಂಕ ________ ರಂದು ಹುಟ್ಟಿದ ________ (ಮಗುವಿನ ಹೆಸರು) ಮೊದಲನೇ/ಎರಡನೇ ಮಗುವಾಗಿದ್ದು, ಬಾಗ್ಯಲಕ್ಷ್ಮಿ ಯೋಜನೆಯಡಿ ಸೌಲಭ್ಯ ಪಡೆಯಲು ಸರ್ಕಾರ ವಿಧಿಸಿರುವ ಶರತ್ತುಗಳನ್ನು ಒಪ್ಪರುತ್ತೇನೆ/ವೆ.

1. ಹೆಣ್ಣು ಮಗುವನ್ನು ತಾರತಮ್ಯ ಮಾಡದೇ ಸಾಕುತ್ತೇವೆ
2. ಯಾವುದೇ ಕಾರಣಕ್ಕೂ ಹೆಣ್ಣು ಮಗುವನ್ನು ಬಾಲ ಕಾರ್ಮಿಕಳನ್ನಾಗಿ ಮಾಡುವುದಿಲ್ಲ.
3. ಕನಿಷ್ಠ 8ನೇ ತರಗತಿಯವರೆಗೆ ವಿದ್ಯಾಭ್ಯಾಸ ಕೊಡಿಸುತ್ತೇವೆ.
4. 18 ವರ್ಷ ತುಂಬುವವರೆಗೆ ಮದುವೆ ಮಾಡುವುದಿಲ್ಲ.
5. ನನ್ನ ಕುಟುಂಬದಲ್ಲಿ ತಪ್ಪಿದಲ್ಲಿ, ನೀಡಿರುವ ಸರ್ಕಾರದ ಸವಲತ್ತುಗಳನ್ನು ಹಿಂಪಡೆಯಬಹುದಾಗಿದೆ.

ಈ ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಮಂಜೂರು ಮಾಡಿರುವ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಬಹುದೆಂದು ಒಪ್ಪಿ ಸಹಿ ಮಾಡಿರುತ್ತೇವೆ.

ಸ್ಥಳ: ________
ದಿನಾಂಕ: ______

ಪೋಷಕರ ಸಹಿ
ಮತ್ತು ಎಡಗೈ ಹೆಬ್ಬೆರಳಿನ ಗುರುತು

********✂******** ಸ್ವೀಕೃತಿಯನ್ನು ಇಲ್ಲಿಗೆ ಕತ್ತರಿಸಿ ******✂********

### ಸ್ವೀಕೃತಿ

ಶ್ರೀಮತಿ............. ಕೋಂ ................ ಇವರ ಮಗಳು ಕುಮಾರಿ ............... ರವರ ಬಾಗ್ಯಲಕ್ಷ್ಮಿ ಯೋಜನೆಯ ಅರ್ಜಿಯನ್ನು ದಿನಾಂಕ ............ ರಂದು ಅಂಗನವಾಡಿ ಕಾರ್ಯಕರ್ತೆ ............. ಕೇಂದ್ರ ರವರಿಂದ ಸ್ವೀಕರಿಸಲಾಗಿದೆ.

ಸ್ಥಳ ............................ ಮೇಲ್ವಿಚಾರಕಿಯ ಹೆಸರು ಸಹಿ.................
ದಿನಾಂಕ............... ತಾಲ್ಲೂಕು/ಜಿಲ್ಲೆಯ ಹೆಸರು .....................

## ನಮೂನೆ-3

## ಮೇಲ್ವಿಚಾರಕಿಯ ದೃಢೀಕರಣ

............................ ಶಿಶು ಅಭಿವೃದ್ಧಿ ಯೋಜನಾ ಕಛೇರಿಯ ವ್ಯಾಪ್ತಿಯಲ್ಲಿ ಬರುವ ............................ ವೃತ್ತದ ........................ ಗ್ರಾಮದ ಅಂಗನವಾಡಿ ಕೇದ್ರದ ವ್ಯಾಪ್ತಿಯಲ್ಲಿ ವಿಳಾಸ .................... ರಲ್ಲಿ ವಾಸಿಸುವ ಶ್ರೀಮತಿ ...................... ಕೋಂ .................................. ಜನ್ಮ ನೀಡಿದ್ದು ಬಾಗ್ಯಲಕ್ಷ್ಮಿ ಯೋಜನೆಯಡಿ ನಿಶ್ಚತ ಠೇವಣಿ 19,300/18,350 ಕ್ಕೆ ಅರ್ಹರಿರುತ್ತಾರೆ.

ಮಗುವಿನ ಜನನ ಪ್ರಮಾಣ ಪರಿಶೀಲಿಸಿ ಲಗತ್ತಿಸಲಾಗಿದೆ ಮಗುವಿನ ತಂದೆ/ತಾಯಿ ಬಡತನ ರೇಖೆಗಿಂತ ಕೆಳಗಿನ ಕುಟುಂಬಕ್ಕೆ ಸೇರಿದವರೆಂಬ ಬಗ್ಗೆ ಸಲ್ಲಿಸಿರುವ ಬಿಪಿಎಲ್ ಕಾರ್ಡ್‌ನ ದಾಖಲೆ ಪರಿಶೀಲಿಸಿ ದೃಢೀಕರಿಸಿದೆ.

ಈ ಕುಟುಂಬದಲ್ಲಿ ಒಟ್ಟು ............ ಮಕ್ಕಳಿದ್ದು, ತಾಯಿ ಅಥವಾ ತಂದೆ ಶಾಶ್ವತ ಕುಟುಂಬ ಯೋಜನೆ ಪದ್ದತಿ ಅಳವಡಿಸಿಕೊಂಡಿರುತ್ತಾರೆ.

ಸ್ಥಳ: ಅಂಗನವಾಡಿ ಕಾರ್ಯಕರ್ತೆ ಸಹಿ....... ಮೇಲ್ವಿಚಾರಕಿ ಸಹಿ.......
ದಿನಾಂಕ: ಅಂಗನವಾಡಿ ಕಾರ್ಯಕರ್ತೆ ಹೆಸರು.... ಮೇಲ್ವಿಚಾರಕಿ ಹೆಸರು...
ಅಂಗನವಾಡಿ ಕೇಂದ್ರ ಹೆಸರು..........
ನಗರಸಭೆ/ಮಹಾನಗರಪಾಲಿಕೆ ಸಿಬ್ಬಂದಿ ಸಹಿ......
ವೃತ್ತದ ಹೆಸರು .........

- ವೃತ್ತದ ಮೇಲ್ವಿಚಾರಕಿಯು ಅಂಗನವಾಡಿ ಕಾರ್ಯಕರ್ತೆಯಿಂದ ಎಲ್ಲಾ ಅವಶ್ಯಕ ದಾಖಲಾತಿಗಳೊಂದಿಗೆ ಪಡೆದು ಒದು ತಿಂಗಳೊಳಗೆ ಕ್ರೊಢೀಕೃತ ಪಟ್ಟಿಯೊಂದಿಗೆ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು.
- ಅಂಗನವಾಡಿ ವ್ಯಾಪ್ತಿಯಿಂದ ಹೊರಗಿರುವ ಮಹಾನಗರ ಪಾಲಿಕೆ/ನಗರಸಭಾ ಪ್ರದೇಶಗಳಲ್ಲಿ ಈ ಕಾರ್ಯವನ್ನು ಮಹಾನಗರ ಪಾಲಿಕೆ ಸಿಬ್ಬಂದಿ/ನಗರ ಸಭೆಗಳಲ್ಲಿ ಸಿಬ್ಬಂದಿಗೆ ವಹಿಸುವುದು.

## ನಮೂನೆ - 4

## ಶಿಶು ಅಭಿವೃದ್ಧಿ ಯೋಜನಾ ಅಧಿಕಾರಿಗಳ ಶಿಫಾರಸ್ಸು

ಶ್ರೀ------------- ರವರ ಪತ್ನಿ ಶ್ರೀಮತಿ ------------ ಇವರು ---------ಗ್ರಾಮದ------------ ಹೋಬಳಿ-------- ----- ತಾಲ್ಲೂಕಿನಲ್ಲಿ ವಾಸಿಸುತ್ತಿದ್ದ ------------ ವೃತ್ತದ ಮೇಲ್ವಿಚಾರಕಿ ಶ್ರೀಮತಿ------------ ಇವರು ಸಲ್ಲಿಸಿರುವ ಎಲ್ಲಾ ವಿವರಗಳ ಸಮರ್ಪಕವಾಗಿರುತ್ತದೆ.ಆದುದರಿಂದ ರೂ 19,300/18,350/-(ಹತ್ತೊಬತ್ತು ಸಾವಿರದ ಮುನ್ನೂರು/ಹದಿನೆಂಟು ಸಾವಿರದ ಮುನ್ನೂರ ಐವತ್ತು ) ಮಾತ್ರಗಳ ನಿಶ್ಚಿತ ಠೇವಣಿ ಹೂಡಲು ಮಂಜುರಾತಿಗಾಗಿ ಉಪ/ಸಹಾಯಕ ನಿರ್ದೇಶಕರು, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ------------ ಜಿಲ್ಲೆ ಇವರಿಗೆ ಶಿಫಾರಸ್ಸು ಮಾಡಲಾಗಿದೆ.

ಸ್ಥಳ:- ಶಿಶು ಅಭಿವೃದ್ಧಿ ಯೋಜನಾ ಅಧಿಕಾರಿಗಳ ಸಹಿ

ಮೊಹರಿನೊಂದಿಗೆ

ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಎಲ್ಲಾ ವೃತ್ತಗಳಿಂದ ಪಡೆದ ಮಾಹಿತಿಯನ್ನು ಪರಿಶೀಲಿಸಿ 15 ದಿನಗಳೊಳಗೆ ಸಂಭಂಧ ಪಟ್ಟ ಉಪ ನಿರ್ದೇಶಕರು. ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಸಲ್ಲಿಸುವುದು

************************

## ನಮೂನೆ – 5

## ಉಪ ನಿರ್ದೇಶಕರು,
## ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
## ಜಿಲ್ಲಾ ಕಛೇರಿಯಲ್ಲಿ ಇರುವ ನಡವಳಿಗಳು

.............................. ಜಿಲ್ಲೆ.................... ತಾಲ್ಲೂಕಿನ................. ಹೋಬಳಿಯ ..................................ವಿಳಾಸದಲ್ಲಿ ವಾಸವಾಗಿರುವ ಶ್ರೀಮತಿ .......................ಗಂಡ ..............................ಇವರಿಗೆ ದಿನಾಂಕದಂದು ಜನಿಸಿದ 1 ನೇ ಅಥವಾ 2ನೇ ಹೆಣ್ಣು ಮಗುವಿನ (ಹೆಸರು) .................... ಬಾಗ್ಯಲಕ್ಷ್ಮಿ ಯೋಜನೆಯಡಿ ರೂ. 19,300/18,350/– (ಹತ್ತೊಬತ್ತು ಸಾವಿರದ ಮುನ್ನೂರು/ಹದಿನೆಂಟು ಸಾವಿರದ ಮುನ್ನೂರ ಐವತ್ತು) ವಾತ್ರಗಳಿಗೆ ಶೀರ್ಷಕೆ 2235–02–102–0–25–100/422/423 ದನ ಸಹಾಯ /ಪರಿಹಾರ(ಯೋಜನೆ) ಆಡಿಯಲ್ಲಿ 18 ವರ್ಷಗಳ ನಿಶ್ಚಿತ ಠೇವಣಿ ಹೂಡಲು ಆದೇಶಿಸಲಾಗಿದೆ

ಸ್ಥಳ:–
ದಿನಾಂಕ:–

ಉಪ ನಿರ್ದೇಶಕರು,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಜಿಲ್ಲಾ ಕಛೇರಿ ಇವರ/ಸಹಿ ಮೊಹರಿನೊಂದಿಗೆ

ರೂ.20/-ಗಳ ಛಾಪಾ ಕಾಗದದಲ್ಲಿ

<u>ನಮೂನೆ:-6</u>

## ಸ್ವಯಂ ಘೋಷಣಾ ವಿವಾಹ ದೃಢೀಕರಣ ಪತ್ರ

ಹೆಸರು : ---------------------------

ವಯಸ್ಸು: ---------------------------

ವಿಳಾಸ: ---------------------------

ತಾಲ್ಲೂಕು: ---------------------------

ಜಿಲ್ಲೆ: ---------------------------

ರಾಜ್ಯ : ---------------------------

ವಿವಾಹವಾದ ದಿನಾಂಕ: ------------------

ಶ್ರೀ------------- ತಂದೆಯ ಹೆಸರು------------------ ಮತ್ತು ಶ್ರೀಮತಿ---------------- ತಂದೆಯ ಹೆಸರು---------- ------ ಆದ ನಾವು ದಿನಾಂಕ ರಂದು ವಿವಾಹಿತರಾಗಿರುತ್ತೇನೆ ಹಾಗೂ ಮೇಲೆ ತಿಳಿಸಿರುವ ಎಲ್ಲಾ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಈಮೂಲಕ ದೃಢೀಕರಿಸಿದೆ. ಒದು ವೇಳೆ ಮೇಲೆ ನಿದಿರುವ ಮಾಹಿತಿಯು ಅಸತ್ಯವೆಂದು ಕಂಡುಬಂದಲ್ಲಿ ಸೌಲಭ್ಯವನ್ನು ಹಿಂಪಡೆಯುಬಹುದಾಗಿದೆ ಹಾಗು ಸರ್ಕಾರವಿದಿಸುವ ಶಿಕ್ಷೆಗೆ ಬದ್ಧಳಾಗಿರುತ್ತೇನೆ.

ಸ್ಥಳ: ----------

ದಿನಾಂಕ:----------

ದಂಪತಿಗಳ ಸಹಿ

.......................................

.......................................

ರೂ.20/-ಗಳ ಛಾಪಾ ಕಾಗದದಲ್ಲಿ

ನಮೂನೆ -7

## ಸ್ವಯಂ ಘೋಷಣಾ ಪ್ರಮಾಣ ಪತ್ರ(ಏಕ ಪೋಷಕರಿಗೆ)

ಹೆಸರು: -------------------------

ವಯಸ್ಸು: -------------------------

ವಿಳಾಸ: -------------------------

ತಾಲ್ಲೂಕು: -------------------------

ಜಿಲ್ಲೆ: -------------------------

ರಾಜ್ಯ: -------------------------

ಕುಮಾರಿ/ಶ್ರೀಮತಿ------------ ತಂದೆಯ ಹೆಸರು------------ ಆದ ನಾನು ಏಕ ಪೋಷಕರು ಎಂದು ಈ ಮೂಲಕ ಘೋಷಿಸುತ್ತೇನೆ. ಮೇಲೆ ತಿಳಿಸಿರುವ ಎಲ್ಲಾ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಈ ಮೂಲಕ ದೃಢೀಕರಿಸಿದೆ. ಒದು ವೇಳೆ ಮೇಲೆ ನಿಡಿರುವ ಮಾಹಿತಿಯು ಅಸತ್ಯವೆಂದು ಕಂಡುಬಂದಲ್ಲಿ ಸೌಲಭ್ಯವನ್ನು ಹಿಂಪಡೆಯಬಹುದಾಗಿದೆ ಹಾಗೂ ಸರ್ಕಾರ ವಿಧಿಸುವ ಶಿಕ್ಷೆಗೆ ಬದ್ದಳಾಗಿರುತ್ತೇನೆ/ಬದ್ದನಾಗಿರುತ್ತೇನೆ.

ಸ್ಥಳ:- ಸಹಿ-----------

ದಿನಾಂಕ:-

ರೂ.20/-ಗಳ ಛಾಪಾ ಕಾಗದದಲ್ಲಿ

## ನಮೂನೆ -8

## ಸ್ವಯಂ ಘೋಷಣಾ ಪ್ರಮಾಣ ಪತ್ರ (ಪರಿತ್ಯಕ್ತೆ)

ಹೆಸರು : ---------------------------

ವಯಸ್ಸು: ---------------------------

ವಿಳಾಸ: ---------------------------

ತಾಲ್ಲೂಕು: ---------------------------

ಜಿಲ್ಲೆ: ---------------------------

ರಾಜ್ಯ : ---------------------------

ವಿವಾಹವಾದ ದಿನಾಂಕ: -----------------

ಶ್ರೀಮತಿ------------ ತಂದೆಯ ಹೆಸರು -----------ಆದ ನಾನು ದಿನಾಂಕ-----------------ರಂದು ವಿವಾಹವಾಗಿದ್ದು ಈಗ ಪರಿತ್ಯಕ್ತೆಳಾಗಿರುತ್ತೇನೆ ಮೇಲೆ ತಿಳಿಸಿರುವ ಎಲ್ಲಾ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಈಮೂಲಕ ದೃಢೀಕರಿಸಿದೆ. ಒದು ವೇಳೆ ಮೇಲೆ ನಿದಿರುವ ಮಾಹಿತಿಯು ಅಸತ್ಯವೆಂದು ಕಂಡುಬಂದಲ್ಲಿ ಸೌಲಭ್ಯವನ್ನು ಹಿಂಪಡೆಯುಬಹುದಾಗಿದೆ ಹಾಗು ಸರ್ಕಾರವಿದಿಸುವ ಶಿಕ್ಷೆಗೆ ಬದ್ದಳಾಗಿರುತ್ತೇನೆ.

ಸ್ಥಳ:-

ದಿನಾಂಕ:- ಸಹಿ-----------

# ಬಾಲ ಸಂಜೀವಿನಿ ಯೋಜನೆಯಡಿ ಮಗುವಿಗೆ ಉಚಿತ ಚಿಕಿತ್ಸೆ

ರಾಜ್ಯದ ಪ್ರತೀ ಅಂಗನವಾಡಿ ವ್ಯಾಪ್ತಿಯಲ್ಲಿ ಬರುವ 0 ಯಿಂದ 6 ವರ್ಷದ ಅನಾರೋಗ್ಯ ಪೀಡಿತ ಮಕ್ಕಳಿಗೆ ಉಚಿತ ಚಿಕಿತ್ಸೆ ನೀಡುವ ಯೋಜನೆಯೆ **ಬಾಲ ಸಂಜೀವಿನಿ ಯೋಜನೆ.** ಮೂರನೆ ಹಂತದ ಚಿಕಿತ್ಸೆಯ ಅವಶ್ಯಕತೆ ಇರುವ ಮಗುವಿಗೆ **ರೂ.35,000/- (ಮುವತ್ತೈದು ಸಾವಿರ ರೂಗಳು ಮಾತ್ರ)** ವರೆವಿಗೆ ಚಿಕಿತ್ಸೆಯ ವೆಚ್ಚವನ್ನು ಬರಿಸಲಾಗುವುದು.

ಆಗ ತಾನೆ ಹುಟ್ಟಿದ ನವಜಾತ ಶಿಶುವಿನ ಆರೋಗ್ಯ ಮತ್ತು ಚಿಕಿತ್ಸೆಗಾಗಿ **ರೂ.50000/- (ಐವತ್ತು ಸಾವಿರ ರೂಗಳು ಮಾತ್ರ)** ವರೆವಿಗೆ ಚಿಕಿತ್ಸೆಯ ವೆಚ್ಚವನ್ನು ಬರಿಸಲಾಗುವುದು.

**ಯೋಜನೆಯ ಉದ್ದೇಶ :**

- ಕಡುಬಡತನದಲ್ಲಿರುವ ಕುಟುಂಬದಲ್ಲಿ 3ನೇ ಹಂತದ ತುರ್ತು ಚಿಕಿತ್ಸೆ ಅವಶ್ಯವಿರುವ ಮಕ್ಕಳಿಗೆ ಸೂಕ್ತ ಚಿಕಿತ್ಸೆ ಒದಗಿಸುವುದು.
- ಮಕ್ಕಳನ್ನು ಆರೋಗ್ಯವಂತರಾಗಿಸುವುದು.
- ಮಕ್ಕಳ ತಾಯಂದಿರಿಗೆ ಶಿಕ್ಷಣ ನೀಡುವುದರ ಮೂಲಕ ಅವರನ್ನು ಮಗುವಿನ ಆರೈಕೆಯಲ್ಲಿ ಸಬಲರನ್ನಾಗಿಸುವುದು.
- ಆರೋಗ್ಯ ಸೇವೆಗಳ ಮೂಲಕ ಹಾಗೂ ಉತ್ತಮ ಪೌಷ್ಠಿಕ ಆಹಾರವನ್ನು ಒದಗಿಸುವುದು.

**ಬಾಲ ಸಂಜೀವಿನಿ ಯೋಜನೆಯಡಿಯಲ್ಲಿ ಚಿಕಿತ್ಸೆ ಸೌಲಭ್ಯ ಪಡೆಯಲು ಈ ಕೆಳಕಂಡವರು ಅರ್ಹರಾಗಿರುತ್ತಾರೆ.**

- ಅಂಗನವಾಡಿ ಕೇಂದ್ರದಲ್ಲಿ ದಾಖಲಾಗಿರುವ ಮಕ್ಕಳು.
- 6 ವರ್ಷದೊಳಗಿನ ಮಕ್ಕಳು.
- ಬಡತನ ರೇಖೆಗಿಂತ ಕೆಳಗಿರುವ ಬಿಪಿಎಲ್ ಕಾರ್ಡ್ ಹೊಂದಿರುವ ಕುಟುಂಬದ ಮಕ್ಕಳು.
- 3ನೇ ಹಂತದ ತುರ್ತು ಚಿಕಿತ್ಸೆ ಅವಶ್ಯವಿರುವ, ನ್ಯೂನ್ಯ ಪೋಷಣೆಗೆ ಒಳಗಾಗಿರುವ ಮಕ್ಕಳು.

**ಈ ಕೆಳಕಂಡ ಆರೋಗ್ಯ ಸಮಸ್ಯೆಗಳಿಗೆ ಚಿಕಿತ್ಸೆ ದೊರೆಯುತ್ತದೆ.**

1. ತೀವ್ರತರ ನಿಮೋನಿಯ
2. ಎನ್ಸೆಫಿಲೈಟಿಸ್ – ಮೆನೆಂಜೈಟಿಸ್
3. ಕ್ಲಿಷ್ಟಕರ ಮಲೇರಿಯ
4. ಅನೀಮಿಯ – (ರಕ್ತಹೀನತೆ)
5. ಡಯಾಬಿಟಿಸ್ (ಮಧುಮೇಹ)
6. ರೀನಲ್ ಸಮಸ್ಯೆಗಳು – ಮೂತ್ರಕೋಶ / ಕಿಡ್ನಿ ಸಮಸ್ಯೆ
7. ನವಜಾತ ಶುಶುವಿನ ಲೆವೆಲ್ – 3 ಚಿಕಿತ್ಸೆ
8. ಲಿವರ್ ತೊಂದರೆ
9. ನ್ಯೂರೋಲಾಜಿಕಲ್ ಡಿಸಾರ್ಡರ್ಸ್
10. ಸೆಕೆಂಡರಿ ಮಾಲ್ ನ್ಯೂಟ್ರಿಷನ್
11. ಕ್ಲಿಷ್ಟ ಅತಿಸಾರ
12. ಮಗುವಿನ ಶಸ್ತ್ರ ಚಿಕಿತ್ಸೆ
13. ವಿಷಜಂತು ಕಡಿತಕ್ಕೆ ಚಿಕಿತ್ಸೆ
14. ವಿಷ ಸೇವನೆ
15. ಹೃದಯ ಸಂಬಂಧಿ ರೋಗಗಳು (ಶಸ್ತ್ರ ಚಿಕಿತ್ಸೆ

ಹೊರತುಪಡಿಸಿ)

16. ತೀವ್ರ ಸೋಂಕು ರೋಗಗಳು
17. ರಕ್ತ ಸಂಬಂಧ ರ್‍ೋಗಗಳು
18. ಅಪಘಾತ ಚಿಕಿತ್ಸೆ

**ಬಾಲ ಸಂಜೀವಿನಿ ಯೋಜನೆಯಡಿಯಲ್ಲಿ ಚಿಕಿತ್ಸೆ ಸೌಲಭ್ಯ ಪಡೆಯಲು ಈ ಕೆಳಕಂಡ ಅಧಿಕಾರಿಗಳು ಮತ್ತು ಇಲಾಖೆಯನ್ನು ಸಂಪರ್ಕಿಸುವುದು.**

- ಅಂಗನವಾಡಿ ಕಾರ್ಯಕರ್ತೆಯರು.
- ಅಂಗನವಾಡಿ ಮೇಲ್ವಿಚಾರಕಿಯರು.
- ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು (**CDPO**).
- ಆರೋಗ್ಯ ಕಾರ್ಯಕರ್ತೆಯರು.
- ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು.

**ವಿಶೇಷ ಸೂಚನೆ:-** ಒಳರೋಗಿಯಾಗಿ ದಾಖಲಾದ ಸಂದರ್ಭದಲ್ಲಿ ಮಗುವಿನೊಡನೆ ತಂಗಲು ಒಬ್ಬರಿಗೆ (ತಾಯಿ/ಪೋಷಕರು) ಅವಕಾಶ ನೀಡಲಾಗುವುದು.
ಪ್ರತಿ ದಿನ ರೂ 100/- ರಂತೆ ಭತ್ಯೆಯನ್ನು ಹಾಗೂ ವಾಸ್ತವಿಕ ಪ್ರಯಾಣ ಭತ್ಯೆಯನ್ನು ತಾಯಿ/ಪೋಷಕರಿಗೆ ನೀಡಲಾಗುವುದು.

## ಬಾಲ ಸಂಜೀವಿನಿ ಯೋಜನೆಯಡಿಯಲ್ಲಿ ರಾಜ್ಯದಲ್ಲಿನ ಈ ಕೆಳಕಂಡ 26 ಆಸ್ಪತ್ರೆಗಳಲ್ಲಿ ಉಚಿತ ಚಿಕಿತ್ಸೆ ಪಡೆಯಬಹುದು

| ಕ್ರ ಸ | ಆಸ್ಪತ್ರೆಗಳ ಪಟ್ಟಿ | ವಿಳಾಸ |
|---|---|---|
| 1. | ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ | ಬೆಂಗಳೂರು |
| 2. | ವಿಕ್ಟೋರಿಯಾ ಆಸ್ಪತ್ರೆ | ಬೆಂಗಳೂರು |
| 3. | ವಾಣಿ ವಿಲಾಸ್ | ಬೆಂಗಳೂರು |
| 4. | ಬೌರಿಂಗ್ | ಬೆಂಗಳೂರು |
| 5. | ಬಾಪೂಜಿ ಮಕ್ಕಳ ಆರೋಗ್ಯ ಸಂಸ್ಥೆ | ದಾವಣಗೆರೆ |
| 6. | ಎಸ್.ಎಸ್.ಎಮ್ ಆಸ್ಪತ್ರೆ | ದಾವಣಗೆರೆ |
| 7. | ಕೆ.ಎಲ್.ಇ ಆಸ್ಪತ್ರೆ | ಬೆಳಗಾಂ |
| 8. | ಎಂ.ಆರ್.ಮೆಡಿಕಲ್ ಕಾಲೇಜ್, ಬಸವೇಶ್ವರ & ಸಂಗಮೇಶ್ವರ ಆಸ್ಪತ್ರೆ | ಗುಲ್ಬರ್ಗ |
| 9. | ಕಸ್ತೂರಬಾ ಮೆಡಿಕಲ್ ಕಾಲೇಜ್ ಆಸ್ಪತ್ರೆ, ಲೇಡಿ ಘೋಷ್ ಹಾಗೂ ವೆನ್ಲಾಕ್ ಆಸ್ಪತ್ರೆ | ಮಂಗಳೂರು |
| 10. | ಹಾನಗಲ್ ಕುಮಾರೇಶ್ವರ ವೈದ್ಯಕೀಯ ಸಂಸ್ಥೆ | ಬಾಗಲಕೋಟೆ |
| 11. | ಶಾಂತಿ ಆಸ್ಪತ್ರೆ | ಬಾಗಲಕೋಟೆ |
| 12. | ಧನುಶ್ ಆಸ್ಪತ್ರೆ | ಬಾಗಲಕೋಟೆ |
| 13. | ನವೋದಯ ವೈದ್ಯಕೀಯ ಸಂಸ್ಥೆ | ರಾಯಚೂರು |
| 14. | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಆಸ್ಪತ್ರೆ | ಧಾರವಾಡ |
| 15. | ಬಸವೇಶ್ವರ ಮೆಡಿಕಲ್ ಕಾಲೇಜ್ | ಚಿತ್ರದುರ್ಗ |
| 16. | ಚೆಲುವಾಂಬ ಆಸ್ಪತ್ರೆ | ಮೈಸೂರು |
| 17. | ಬಿ. ಎಂ ಪಾಟೀಲ್ ಮೆಡಿಕಲ್ ಕಾಲೇಜ್ | ಬಿಜಾಪುರ |
| 18. | ಡಾ// ಬಿದರಿ ಅಶ್ವಿನಿ ಆಸ್ಪತ್ರೆ | ಬಿಜಾಪುರ |
| 19. | ಸಂಜೀವಿನಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ | ಬಿಜಾಪುರ |
| 20. | ಆರ್.ಎಲ್ ಜಾಲಪ್ಪ ಮೆಡಿಕಲ್ ಕಾಲೇಜ್ | ಕೋಲಾರ |
| 21. | ಕೆ.ಎಮ್.ಸಿ ಆಸ್ಪತ್ರೆ, ಮಣಿಪಾಲ್ | ಉಡುಪಿ |
| 22. | ವಿಜಯನಗರ ವೈದ್ಯಕೀಯ ವಿಜ್ಞಾನ ಸಂಸ್ಥೆ (ವಿಮ್ಸ್) | ಬಳ್ಳಾರಿ |
| 23. | ಸಿ.ಪಿ.ಎಸ್.ಐ ರೆಡ್ ಕ್ರಿನ್ ಆಸ್ಪತ್ರೆ | ಹಾಸನ |
| 24. | ಮಹಾತ್ಮಗಾಂಧಿ ಮಲ್ಟಿಸ್ಪೆಷಾಲಿಟಿ ಆಸ್ಪತ್ರೆಮತ್ತು ಸಂಶೋಧನಾ ಕೇಂದ್ರ | ಗದಗ |
| 25. | ಸಲಗೆರೆ ಮಕ್ಕಳ ಆಸ್ಪತ್ರೆ | ಚಿಕ್ಕೋಡಿ |
| 26. | ಆದಿಚುಂಚನಗಿರಿ ವೈದ್ಯಕೀಯ ವಿಜ್ಞಾನ ಸಂಸ್ಥೆ (ವಿಮ್ಸ್) | ಮಂಡ್ಯ |

ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕಿಯರಿಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರದ ವತಿಯಿಂದ ನೀಡುತ್ತಿರುವ ಮಾಹೆಯಾನ ಗೌರವಧನದ ವಿವರ (ಏಪ್ರಿಲ್-2014 ರಿಂದ)

| ಕ್ರ. ಸಂ. | ವಿದ್ಯಾರ್ಹತೆಯ ವಿವರ | ಭಾರತ ಸರ್ಕಾರದಿಂದ ನೀಡುತ್ತಿರುವ ಗೌರವಧನ | ರಾಜ್ಯ ಸರ್ಕಾರದಿಂದ ನೀಡುತ್ತಿರುವ ಹೆಚ್ಚುವರಿ ಗೌರವಧನ | ಒಟ್ಟು |
|---|---|---|---|---|
| 1 | ಕಾರ್ಯಕರ್ತೆಯರಿಗೆ ಎಸ್.ಎಸ್.ಎಲ್.ಸಿ. ಅನುತ್ತೀರ್ಣ | 2938 | 2500 | 5438 |
| 2 | ಎಸ್.ಎಸ್.ಎಲ್.ಸಿ. ಅನುತ್ತೀರ್ಣ ಜೊತೆಗೆ 5 ವರ್ಷದ ಅನುಭವ | 2969 | 2500 | 5469 |
| 3 | ಎಸ್.ಎಸ್.ಎಲ್.ಸಿ. ಅನುತ್ತೀರ್ಣ ಜೊತೆಗೆ 10 ವರ್ಷದ ಅನುಭವ | 3000 | 2500 | 5500 |
| 4 | ಎಸ್.ಎಸ್.ಎಲ್.ಸಿ.ಉತ್ತೀರ್ಣ | 3000 | 2500 | 5500 |
| 5 | ಎಸ್.ಎಸ್.ಎಲ್.ಸಿ.ಉತ್ತೀರ್ಣ ಜೊತೆಗೆ 5 ವರ್ಷದ ಅನುಭವ | 3031 | 2500 | 5531 |
| 6 | ಎಸ್.ಎಸ್.ಎಲ್.ಸಿ.ಉತ್ತೀರ್ಣ ಜೊತೆಗೆ 10 ವರ್ಷದ ಅನುಭವ | 3063 | 2500 | 5563 |
| 7 | ಅಂಗನವಾಡಿ ಸಹಾಯಕಿಯರು | 1500 | 1250 | 2750 |
| 8 | ಮಿನಿ ಅಂಗನವಾಡಿ ಕಾರ್ಯಕರ್ತೆಯರು | 2250 | 1250 | 3500 |

ಜಂಟಿ ನಿರ್ದೇಶಕರು(ಐ.ಸಿ.ಡಿ.ಎಸ್.),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬೆಂಗಳೂರು.

# ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ಇರುವ ಸೌಲಭ್ಯಗಳು

**ಅಂಗನವಾಡಿ ಕಾರ್ಯಕರ್ತೆಯರಿಗೆ ಸೌಲಭ್ಯಗಳು:**

- ಪ್ರತೀ ತಿಂಗಳ ಗೌರವ ಧನ – 5500
- ಮಿನಿ ಅಂಗನವಾಡಿ ಕಾರ್ಯಕರ್ತೆಯರಿಗೆ ರೂ 3500/– ಗೌರವ ಧನ
- ಪ್ರತೀ ವರ್ಷ ಸಮವಸ್ತ್ರ ರೂಪದಲ್ಲಿ 2 ಸೀರೆಗಳನ್ನು ನೀಡಲಾಗುವುದು.
- 6 ತಿಂಗಳು ಹೆರಿಗೆ ರಜೆ.
- ಗರ್ಭಪಾತವಾದಲ್ಲಿ 45 ದಿನಗಳ ರಜೆ.
- 15 ದಿನಗಳ ಬೇಸಿಗೆ ರಜೆ.
- ವೈದ್ಯಕೀಯ ಚಿಕಿತ್ಸೆಗಾಗಿ ರೂ 20000/– ನೀಡಲಾಗುವುದು.
- ಮರಣ ಪರಿಹಾರವಾಗಿ– ರೂ. 50000/– ರೂಗಳು ನೀಡಲಾಗುವುದು.
- ಕಾರ್ಯಕರ್ತೆಯರಿಗೆ ಪ್ರತಿ ತಿಂಗಳು ನೀಡುವ ಗೌರವ ಧನದಲ್ಲಿ 150 ರೂಗಳನ್ನು ಮತ್ತು ಸರ್ಕಾರವು 150 ರೂಗಳನ್ನು ಒಟ್ಟು 300 ರೂಗಳ ವಂತಿಗೆಯನ್ನು ಭರಿಸಲಾಗುತ್ತದೆ. 56 ರಿಂದ 60 ವರ್ಷ ವಯಸ್ಸಿನ ನಿವೃತ್ತಿ ನಂತರ ಇಡಿಗಂಟಾಗಿ 50000/– ರೂಗಳು ನೀಡಲಾಗುವುದು.
- 18 ರಿಂದ 25 ವರ್ಷ ವಯಸ್ಸಿನ ಕಾರ್ಯಕರ್ತೆಯರಗೆ ಪ್ರತಿ ತಿಂಗಳು ರೂ 500/– ಪಿಂಚಣಿ ನೀಡಲಾಗುವುದು. ವಯಸ್ಸಿಗೆ ಅನುಗುಣವಾಗಿ ಪಿಂಚಣಿ ಮೊತ್ತವನ್ನು ಹೆಚ್ಚಿಸಲಾಗುವುದು.





- ಅಂಗನವಾಡಿ ಕಾರ್ಯಕರ್ತೆಯನ್ನು ಫಲಾನುಭವಿಗಳೆಂದು ಪರಿಗಳಿಸಿ ರೂ 7/- ಮೌಲ್ಯದ ಪೂರಕ ಪೌಷ್ಠಿಕ ಆಹಾರ ನೀಡಲಾಗುವುದು.
- ಮಕ್ಕಳಿಗೆ ವಿದ್ಯಾರ್ಥಿ ವೇತನ ನೀಡಲಾಗುವುದು.
- ಜನಶ್ರೀ ವಿಮಾ ಯೋಜನೆ ಸೌಲಭ್ಯವಿದೆ.

**ಅಂಗನವಾಡಿ ಸಹಾಯಕಿಯರಿಗೆ ಇರುವ ಸೌಲಭ್ಯಗಳು**

- ಪ್ರತೀ ತಿಂಗಳ ಗೌರವ ಧನ – ರೂ. 2,750
- ಪ್ರತೀ ವರ್ಷ ಸಮವಸ್ತ್ರ ರೂಪದಲ್ಲಿ 2 ಸೀರೆ.
- ವೈದ್ಯಕೀಯ ಚಿಕಿತ್ಸೆಗಾಗಿ – ರೂ. 10,000/–
- ಮರಣ ಪರಿಹಾರವಾಗಿ –ರೂ 50,000/–
- ನಿವೃತ್ತಿ ನಂತರ ಇಡಿಗಂಟಾಗಿ ರೂ. 30,000/–
- 18 ರಿಂದ 25 ವರ್ಷ ವಯಸ್ಸಿನ ಕಾರ್ಯಕರ್ತೆಯರಗೆ ಪ್ರತಿ ತಿಂಗಳು ರೂ 350/– ಪಿಂಚಣಿ.
- ಮಕ್ಕಳಿಗೆ ವಿದ್ಯಾರ್ಥಿ ವೇತನ ನೀಡಲಾಗುವುದು.
- ಜನಶ್ರೀ ವಿಮಾ ಯೋಜನೆ ಸೌಲಭ್ಯವಿದೆ

**ಅಂಗನವಾಡಿ ಕಾರ್ಯಕರ್ತೆಯರ ಕಾರ್ಯ ಮತ್ತು ಜವಾಬ್ದಾರಿಗಳು**

- ಜನ ಸಮುದಾಯದ ಸಮೀಕ್ಷೆ ಕೈಗೊಂಡು, ಸಹಾಯ ಅಗತ್ಯವಿರುವಂಥವರ ವಿವರ ಸಂಗ್ರಹಿಸುವುದು.
- ಪ್ರತೀ ಮೂರು ತಿಂಗಳಿಗೊಮ್ಮೆ ಸಮುದಾಯವನ್ನು ಸರ್ವೆ ಮಾಡುವುದು.
- ಅಂಗನವಾಡಿ ವ್ಯಾಪ್ತಿಯಲ್ಲಿ ಬರುವ 6 ವರ್ಷಕ್ಕಿಂತ ಕಡಿಮೆ

ಇರುವ ಮಕ್ಕಳು, ಗರ್ಭಿಣಿಯರು, ಹಾಲುಣಿಸುವ ತಾಯಂದಿರು ಹಾಗೂ ಕಿಶೋರಿಯರ ಪಟ್ಟಿಯನ್ನು ಸಿದ್ಧಪಡಿಸಿ ಇವರಲ್ಲಿ ಅನಾರೋಗ್ಯದಲ್ಲಿ ಇರುವವರ ಬಗ್ಗೆ ಆರೋಗ್ಯ ಕಾರ್ಯಕರ್ತೆಗೆ ಮಾಹಿತಿ ನೀಡುವುದು.

- ಜನನ ಮತ್ತು ಮರಣಗಳನ್ನು ದಾಖಲಿಸುವುದು.
- 6 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳ ತೂಕವನ್ನು ದಾಖಲಿಸುವುದು.
- 3 ರಿಂದ 6 ವರ್ಷದ ಒಳಗಿನ ಮಕ್ಕಳಿಗೆ ಅಂಗನವಾಡಿಯಲ್ಲಿ ರೂಢಿಗತವಲ್ಲದ ಶಾಲಾ ಪೂರ್ವ ಶಿಕ್ಷಣವನ್ನು ಒದಗಿಸುವುದು.
- ಮಕ್ಕಳಿಗೆ (6 ತಿಂಗಳಿಂದ 6 ವರ್ಷ ವಯಸ್ಸಿನ) ಗರ್ಭಿಣಿ ಸ್ತ್ರೀಯರಿಗೆ ಬಾಣಂತಿಯರಿಗೆ ಮತ್ತು ಕಿಶೋರಿಯರಿಗೆ ಪೋರಕ ಪೌಷ್ಟಿಕ ಆಹಾರವನ್ನು ನೀಡುವುದು.
- ತಾಯಂದಿರಿಗೆ ಪೌಷ್ಠಿಕ ಆಹಾರದ ಮಹತ್ವ ಹಾಗೂ ಆರೋಗ್ಯದ ಬಗ್ಗೆ ತಿಳಿವಳಿಕೆ ನೀಡುವುದು.
- ಮನೆಗಳಿಗೆ ಬೇಟಿ ನೀಡಿ ತೊಂದರೆಯಲ್ಲಿರುವ ಮಗುವಿನ ತಂದೆ ತಾಯಿಯರಿಗೆ ತಿಳಿವಳಿಕೆ ನೀಡಿ ಮಗುವಿನ ಬೆಳವಣಿಗೆಯಲ್ಲಿ ಸಹಕಾರಿಯಾಗುವುದು.
- ಅಂಗನವಾಡಿಯಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಸಮುದಾಯದ ಬೆಂಬಲವನ್ನು ಪಡೆಯುವುದು.
- ರೋಗ ನಿರೋಧಕ ಚುಚ್ಚು ಮದ್ದು, ಆರೋಗ್ಯ ತಪಾಸಣೆ, ಆರೋಗ್ಯ ಶಿಕ್ಷಣ, ಮಾಹಿತಿ ಸೇವೆಗಳು ಹಾಗೂ ಸಮಗ್ರ ಶಿಶು ಅಭಿವೃದ್ಧಿ ಸೇವಾ ಕಾರ್ಯಕ್ರಮದಲ್ಲಿನ ಆರೋಗ್ಯ ಸೇವೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರದ ಸಿಬ್ಬಂದಿಗಳಿಗೆ ನೆರವಾಗುವುದು.

- ನಿಗದಿಪಡಿಸಿದ ರಿಜಿಸ್ಟರ್‌ಗಳು ಮತ್ತು ದಾಖಲೆಗಳನ್ನು ಕಾಪಾಡುವುದು.
- ಗ್ರಾಮದಲ್ಲಿ ನಡೆಯುವ ಯಾವುದೇ ಘಟನೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಶಿಶು ಅಭಿವೃದ್ಧಿ ಇಲಾಖೆಯ ಮೇಲ್ವಿಚಾರಕಿಯರಿಗೆ ವರದಿ ಮಾಡುವುದು.

**ಅಂಗನವಾಡಿ ಸಹಾಯಕಿಯರ ಕಾರ್ಯ ಮತ್ತು ಜವಾಬ್ದಾರಿಗಳು**

- ಅಂಗನವಾಡಿಯಲ್ಲಿ ಶುಚಿಯಾದ ಆಹಾರವನ್ನು ತಯಾರಿಸಿ ಮಕ್ಕಳಿಗೆ ನೀಡುವುದು.
- ಅಂಗನವಾಡಿಯ ಆವರಣವನ್ನು ಶುಚಿಯಾಗಿಡುವುದು.
- ಮಕ್ಕಳನ್ನು ಶುಚಿಯಾಗಿರುವಂತೆ ನೋಡಿಕೊಳ್ಳುವುದು.
- ಮಕ್ಕಳನ್ನು ಮನೆಗಳಿಂದ ಅಂಗನವಾಡಿ ಕೇಂದ್ರಕ್ಕೆ ಕರೆತರುವುದು.
- ಅಂಗನವಾಡಿ ಕಾರ್ಯಕರ್ತೆಯು ಸಭೆಗಳಿಗೆ ಮತ್ತು ಮನೆ ಭೇಟಿಗೆ ಹೋದಾಗ ಅಂಗನವಾಡಿ ಕೇಂದ್ರದ ಜವಾಬ್ದಾರಿಯನ್ನು ನಿರ್ವಹಿಸುವುದು.

**ಅಂಗನವಾಡಿಗಳ ಮೇಲ್ವಿಚಾರಕಿಯರ ಕಾರ್ಯ ಮತ್ತು ಜವಾಬ್ದಾರಿಗಳು.**

- ಅಂಗನವಾಡಿ ಕಾರ್ಯಕರ್ತೆಯರು ಅವರ ವ್ಯಾಪ್ತಿಗೆ ಬರುವ ಪ್ರದೇಶದಲ್ಲಿನ ಕುಟುಂಬಗಳ ಸಮಿಕ್ಷೆ ನಡೆಸಲು, ಆ ಪ್ರದೇಶ/ಗ್ರಾಮದಲ್ಲಿನ ಜನನ-ಮರಣಗಳನ್ನು ದಾಖಲೆ, ಫಲಾನುಭವಿಗಳ ವಿವರಗಳನ್ನು ಸಮರ್ಪಕವಾಗಿ ನಿರ್ವಹಿಸಲು ಸಹಕರಿಸುವುದು.
- ಮೇಲ್ವಿಚಾರಕಿಯರ ವ್ಯಾಪ್ತಿಗೆ ಒಳಪಡೆವ ಅರ್ಹ ಫಲಾನುಭವಿಗಳಿಗೆ ಸರಿಯಾದ ಸಮಯಕ್ಕೆ ಸೇವೆಗಳು ತಲುವುವಂತೆ ನೋಡಿಕೊಳ್ಳುವುದು.

- ಅಂಗನವಾಡಿ ಕಾರ್ಯಕರ್ತೆಯರು ಅವರ ವ್ಯಾಪ್ತಿಯಲ್ಲಿ ಬರುವ ಅನಾರೋಗ್ಯ ಪೀಡಿತ ಮಕ್ಕಳನ್ನು ಪತ್ತೆಮಾಡುವುದು, ಮಕ್ಕಳನ್ನು ತೂಕ ಮಾಡುವುದು, ಅಪಾಯದ ಸ್ಥಿತಿಯಲ್ಲಿರುವ ಮಕ್ಕಳನ್ನು ಆರೋಗ್ಯ ಕೇಂದ್ರಗಳಿಗೆ ಕಳುಹಿಸುವುದು. ಇತರೆ ಕಾರ್ಯಗಳಿಗೆ ಸಂಬಂಧಿಸಿದಂತೆ ಅಂಗನವಾಡಿ ಕಾರ್ಯಕರ್ತೆಯರಿಗೆ ತರಬೇತಿಗಳನ್ನು ನೀಡುವುದು.
- ಅಂಗನವಾಡಿ ಕಾರ್ಯಗಳಿಗೆ ಸಂಬಂಧಿಸಿದಂತೆ ಕ್ಷೇತ್ರ ಬೇಟಿ ಮಾಡುವುದು. ತಿಂಗಳಿಗೊಮ್ಮೆಯಾದರು ಅಂಗನವಾಡಿಗಳಿಗೆ ಬೇಟಿ ನೀಡುವುದು.
- ಆರೋಗ್ಯ ಮತ್ತು ಪೋಷಕಾಂಶ ಶಿಕ್ಷಣ ತರಬೇತಿ ಹಾಗೂ ಜಾಗೃತಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು.
- ಪ್ರತೀ ಅಂಗನವಾಡಿ ಕೇಂದ್ರಗಳ ರಿಜಿಸ್ಟರ್, ಹಾಜರಾತಿ ಪುಸ್ತಕ, ಬಾಲ ವಿಕಾಸ ಸಮಿತಿ ಸಭೆಗಳ, ತಾಯಂದಿರ ಸಭೆಗಳ ನಡಾವಳಿ ಪುಸ್ತಕ, ನಗದು ಮತ್ತು ಲೆಕ್ಕ ಪುಸ್ತಕಗಳನ್ನು ಕಾಲ ಕಾಲಕ್ಕೆ ಪರಿಶೀಲನೆ ನಡೆಸಿ ಕಾರ್ಯಕರ್ತೆಯರಿಗೆ ಸಲಹೆ ಸೂಚನೆಗಳನ್ನು ನೀಡುವುದು.
- ಇಲಾಖೆಯ ಯೋಜನೆಗಳ ಪ್ರಗತಿಯನ್ನು ಪ್ರತಿ ಅಂಗನವಾಡಿಗಳಲ್ಲಿ ಪರಿಶೀಲಿಸಿ ಕಾರ್ಯಗತಗೊಳಿಸುವಲ್ಲಿ ಇರುವ ಸಮಸ್ಯೆಗಳ ಬಗ್ಗೆ ಸಿಬ್ಬಂದ್ಧಿಯೊಂದಿಗೆ ಚರ್ಚಿಸುವುದು.
- ಅಂಗನವಾಡಿ ಕಾರ್ಯಕರ್ತೆಯರು, ಸಮಗ್ರ ಶಿಶು ಅಭಿವೃದ್ಧಿ ಯೋಜನಾಧೀಕಾರಿಗಳು ಮತ್ತು ಆರೋಗ್ಯ ಇಲಾಖೆಯ ಸಿಬ್ಬಂದ್ಧಿಗಳ ನಡುವೆ ಸಂಪರ್ಕ ಸೇತುವೆಯಾಗಿ ಕಾರ್ಯ ನಿರ್ವಹಿಸುವುದು.
- ಭಾಗ್ಯಲಕ್ಷ್ಮೀ ಯೋಜನೆ ಹಾಗೂ ಸ್ತ್ರೀ ಶಕ್ತಿ ಯೋಜನೆ ಇತರೆ ಯೋಜನೆಗಳನ್ನು ಕ್ಷೇತ್ರ ಮಟ್ಟದಲ್ಲಿ ಅನುಷ್ಠಾನಗೊಳಿಸುವುದು.

## ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ (CDPO) ಕಾರ್ಯ ಮತ್ತು ಜವಾಬ್ದಾರಿಗಳು

- ಕ್ಷೇತ್ರ ಮಟ್ಟದಲ್ಲಿ ಐಸಿಡಿಎಸ್ ತಂಡದ ನಾಯಕರಾಗಿ ಕಾರ್ಯ ನಿರ್ವಹಿಸಬೇಕು. ಐಸಿಡಿಎಸ್ ಯೋಜನೆಯ ಜವಾಬ್ದಾರಿ ಈ ಅಧಿಕಾರಿಯದ್ದಾಗಿದ್ದು, ಯೋಜನೆಯ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸುವಲ್ಲಿ ಮತ್ತು ದೈನಂದಿನ ಆಡಳಿತ ಮೇಲ್ವಿಚಾರಣೆಯ ಉಸ್ತುವಾರಿಯನ್ನು ವಹಿಸಿಕೊಳ್ಳಬೇಕು.
- ಅಂಗನವಾಡಿ ಚಟುವಟಿಕೆಗಳನ್ನು ಸರಾಗವಾಗಿ ನಡೆಸಿ ಕೊಂಡು ಹೋಗಲು, ಪ್ರತಿ ಅಂಗನವಾಡಿಗೆ ಹಣ ವಿತರಣೆ ಮಾಡುವುದು, ಮಾಸಿಕ ಹಾಗೂ ವಾರ್ಷಿಕ ಆಯವ್ಯಯ ತಯಾರಿಸುವುದು.
- ಮೇಲ್ವಿಚಾರಕರು ಹಾಗೂ ಅಂಗನವಾಡಿ ಕಾರ್ಯಕರ್ತರ ಕರ್ತವ್ಯವೆ ಅಲ್ಲದೇ ಯೋಜನಾ ತಂಡದ ಮೇಲ್ವಿಚಾರಣೆ, ಸಲಹೆ ಇತ್ಯಾದಿಗಳನ್ನು ಮಾಡಬೇಕು. ಈ ಉದ್ದೇಶದಿಂದ ಕ್ಷೇತ್ರಕ್ಕೆ ಭೇಟಿ ನೀಡುವುದು, ಸಿಬ್ಬಂಧಿಗಳ ಸಭೆ ಕರೆಯುವುದು.
- ಆಯಾ ಪ್ರದೇಶದಲ್ಲಿರುವ ಮಕ್ಕಳು, ಗರ್ಭಿಣಿಯರು ಮತ್ತು ಹಾಲೂಡಿಸುತ್ತಿರುವ ತಾಯಂದಿರ ಮಾಹಿತಿ ಸಂಗ್ರಹಿಸಲು, ಜನಗಣತಿ ಕೆಲಸ ಮಾಡಲು ಅಂಗನವಾಡಿ ಕಾರ್ಯಕರ್ತೆಯರಿಗೆ ಸಹಾಯ ಮಾಡುವುದು. ಈ ಎಲ್ಲಾ ಸಮೀಕ್ಷಾ ವರದಿಗಳು ಮತ್ತು ಸಿಡಿಪಿ ಅಧಿಕಾರಿಗಳು ಸ್ವತಃ ಸಂಗ್ರಹಿಸಿದ ಮಾಹಿತಿಯಿಂದ ಸಿಡಿಪಿ ಅಧಿಕಾರಿಯು ಯೋಜನಾ ವರದಿಯನ್ನು ತಯಾರಿಸುವುದು.
- ಕ್ಷೇತ್ರ ಮತ್ತು ಅಂಗನವಾಡಿ ಕೇಂದ್ರದ ಮಟ್ಟದಲ್ಲಿ ಸರಿಯಾದ ರಿಜಿಸ್ಟರು ಮತ್ತಿತರ ದಾಖಲೆಗಳನ್ನು ಇಡಲಾಗಿದೆಯೆ ಎಂದು ಪರಿಶೀಲಿಸುವುದು. ಆಗಾಗ್ಗೆ ಈ ದಾಖಲೆಗಳನ್ನು ತನಿಖೆ ಮಾಡುವುದು.

- ಸಮಗ್ರ ಬಾಲ ಅಭಿವೃದ್ಧಿ ಸೇವಾ ಕಾರ್ಯಕ್ರಮದಲ್ಲಿ ನಮೂದಾಗಿರುವಂತೆ ವಿವಿಧ ಸಾಮಗ್ರಿಗಳನ್ನು ದೋರಕಿಸಿ, ಸಾಗಿಸಿ, ಸಂಗ್ರಹಿಸಿ, ವಿತರಣೆ ಮಾಡುವುದು. ಇದಕ್ಕೆ ಜಿಲ್ಲಾ ಮತ್ತು ರಾಜ್ಯ ಮಟ್ಟದ ಅಧಿಕಾರಿಗಳೊಡನೆ ಸೂಕ್ತ ಸಂಪರ್ಕ ಕಲ್ಪಿಸತಕ್ಕದ್ದು.
- ಐಸಿಡಿಎಸ್ ಕಾರ್ಯಕ್ರಮಕ್ಕೆ ಸರಬರಾಜು ಮಾಡಿದ ಉಪಕರಣ, ಪದಾರ್ಥಗಳಿಗೆಲ್ಲ ಸರಿಯದ ಲೆಕ್ಕ ಇಡಲಾಗಿದೆಯೇ ಎಂದು ಖಾತರಿ ಮಾಡಿಕೋಳ್ಳುವುದು.
- ಕ್ಷೇತ್ರ ಮಟ್ಟದ, ಸಮಿತಿಯ ಅಥವಾ ಕಾರ್ಯಕಾರಿ ಸಮಿತಿಯ ಸಂಚಾಲಕರಾಗಿ ಕೆಲಸ ಮಾಡಬೇಕು. ಸಮಿತಿಯ ಸಭೆಗಳನ್ನು ವ್ಯವಸ್ಥೆ ಮಾಡಿ, ಚರ್ಚಿಸಬೇಕಾದ ವಿಷಯಗಳನ್ನು ಗುರುತು ಹಾಕಿ, ಸಭೆಯ ನಡವಳಿಗಳನ್ನು ಧಾಖಲು ಮಾಡಬೇಕು. ಯೋಜನೆಯ ಕಾರ್ಯಕ್ರಮ ಸರಿಯಾದ ರೀತಿಯಲ್ಲಿ ಆಚರಣೆಗೆ ಬರುವಲ್ಲಿ ಕ್ರಮ ಕೈಗೊಳ್ಳುವುದು.
- ಕ್ಷೇತ್ರದ ಅವಿಭಾಜ್ಯ ಅಂಗದಂತೆ ನಡೆದುಕೊಳ್ಳಬೇಕು. ಕ್ಷೇತ್ರದ ಮುಖ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಪಂಚಾಯಿತಿ ರಾಜ್ಯ ಸಂಸ್ಥೆಗಳು ಮತ್ತು ಇನ್ನಿತರ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಸಂಸ್ಥೆಗಳ ಸಂಪರ್ಕಾಧಿಕಾರಿಯಾಗಿ ಕೆಲಸ ಮಾಡಬೇಕು.
- ಅಂಗನವಾಡಿ ಕಾರ್ಯಕರ್ತೆರಿಗೆ ಮತ್ತು ಯೋಜನೆಯ ಇತರ ಕಾರ್ಯಕರ್ತರಿಗೆ ಬೇಕಾಗುವ ಸಾದಿಲ್ವಾರು ಖರ್ಚನ್ನು (ಆರೋಗ್ಯಕ್ಕೆ ಸಂಬಂಧಿಸಿದ ಪದಾರ್ಥಗಳನ್ನು ಬಿಟ್ಟು) ವಿತರಣೆ ಮಾಡುವುದು.
- ಐಸಿಡಿಎಸ್ ಕಾರ್ಯಕ್ರಮವನ್ನು ಜಾರಿಗೊಳಿಸುವಲ್ಲಿ ಸ್ಥಳೀಯ ಜನ ಸಮುದಾಯದ ಸಹಕಾರ ಮತ್ತು ಸಹಭಾಗಿತ್ವಕ್ಕಾಗಿ ಪ್ರಯತ್ನ ಮಾಡುವುದು. ಆಹಾರ ಪದಾರ್ಥಗಳು, ಕಟ್ಟಡ ಸಾಮಗ್ರಿಗಳು,

ಮತ್ತಿತರ ಸೇವೆಗಳನ್ನು ಒದಗಿಸುವಲ್ಲಿ ಸ್ಥಳೀಯ ಜನರ ಮನಹೊಲಿಸಿ ಉತ್ತೇಜನ ಕೊಡುವುದು.

- ಗ್ರಾಮ ಮಟ್ಟದ ಸಂಚಾಲನ ಸಮಿತಿಗಳನ್ನು ರಚಿಸಿ, ನಡೆಸಿಕೊಂಡು ಹೋಗುವಲ್ಲಿ ಅಂಗನವಾಡಿ ಕಾರ್ಯಕರ್ತೆರಿಗೆ ಸಹಾಯ ಮಾಡುವುದು. ಗ್ರಾಮೀಣ ಮಹಿಳಾ ಮಂಡಳಿ, ಯುವಜನ ಕ್ಷೇತ್ರಗಳು, ಅವುಗಳ ಜೊತೆ ಮಧುರವಾದ ಭಾಂದವ್ಯಗಳನ್ನು ಉಂಟ್ಟು ಮಾಡುವಲ್ಲಿ ಸಹಾಯ ಮಾಡುಬೇಕು.
- ಕ್ಷೇತ್ರದ ಇತರ ಸಿಬ್ಬಂದಿಯ ಸಹಾಯದಿಂದ್ದ ಪೋಷಣೆ, ಶುಚಿತ್ವದ ಬಗ್ಗೆ ಪ್ರಾತ್ಯಕ್ಷತೆಗಳನ್ನು ಏರ್ಪಡಿಸುವುದು.
- ಸಂಬಂಧಿಸಿದ ಮೇಲಧಿಕಾರಿಗಳಿಗೆ ಕಾಲಕಾಲಕ್ಕೆ ವರದಿಗಳನ್ನ ತಯಾರಿಸಿ ಕಳುಹಿಸುವುದು. ರಾಜ್ಯ ಮತ್ತು ಕೇಂದ್ರದ ಐಸಿಡಿಎಸ್ ಯೂನಿಟ್‌ಗಳಿಗೆ ಬೇಕಾದ ಎಲ್ಲಾ ಮಾಹಿತಿಯನ್ನು ಒದಗಿಸಬೇಕು.
- ಕ್ಷೇತ್ರ ಮಟ್ಟದಲ್ಲಿ ಮಾಡಬೇಕಾದ ಸಿಬ್ಬಂದಿ ನೇಮಕಾತಿಗೆ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು ಅಗತ್ಯವಾದ ಮೇಲ್ವಿಚಾರಕರನ್ನು ಮತ್ತು ಅಂಗನವಾಡಿ ಕಾರ್ಯಕರ್ತೆಯರನ್ನು ತರಬೇತಿ ಇತ್ಯಾದಿ ಕಾರ್ಯಕ್ರಮಗಳಿಗೆ ಕಳುಹಿಸುವುದು.
- ಕಾಲ ಕಾಲಕ್ಕೆ ಕ್ಷೇತ್ರ ಭೇಟಿಗಳನ್ನು ಮಾಡಿ, ಮಾಸಿಕ ಪ್ರವಾಸ ಕಾರ್ಯಕ್ರಮವನ್ನು ಬಿಡಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ ವೈದ್ಯಾಧಿಕಾರಿಗಳೊಂದಿಗೆ ಸಮಾಲೋಚಿಸಿ ಏರ್ಪಡಿಸಿ ಕೊಳ್ಳಬೇಕು.
- ಪ್ರತ್ಯೇಕ ಸಂರಕ್ಷಣಾಧಿಕಾರಿ ಹುದ್ದೆ ಸೃಷ್ಟಿಯಾಗದೇ ಇರುವ ತಾಲ್ಲೂಕುಗಳಲ್ಲಿ ಈ ಅಧಿಕಾರಿಗಳು ಕೌಟುಂಬಿಕ ಹಿಂಸೆಯಿಂದ ಮಹಿಳೆಯರನ್ನು ಸಂರಕ್ಷಿಸುವ ಕಾಯ್ದೆಯಡಿ ಸಂರಕ್ಷಣಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುವುದು.

- ಐಸಿಡಿಎಸ್ ಯೋಜನೆಯಲ್ಲದೆ ಇಲಾಖೆಯ ಇನ್ನಿತರೆ ಕಾರ್ಯಕ್ರಮಗಳಾದ ಭಾಗ್ಯಲಕ್ಷ್ಮಿ, ಸ್ತ್ರೀಶಕ್ತಿ, ಬಾಲ್ಯ ವಿವಾಹ ನಿಷೇಧ ಕಾಯ್ದೆ ಹಾಗೂ ಇನ್ನಿತರ ಯೋಜನೇಗಳ ಅನುಷ್ಠಾನ ಅಧಿಕಾರಿಗಳಾಗಿ ಕಾರ್ಯ ನಿರ್ವಹಿಸಬೇಕು.

## ನಗರ ಪ್ರದೇಶದ ಬಾಲವಿಕಾಸ ಸಮಿತಿಯ ರಚನೆ

ಬಾಲವಿಕಾಸ ಸಮಿತಿಯಲ್ಲಿ ಒಟ್ಟು 13 ಸದಸ್ಯರಿರುತ್ತಾರೆ. ಮೇಲ್ವಿಚಾರಕಿಯಿಂದ ಆಯ್ಕೆಯಾದ ಸ್ತ್ರೀಶಕ್ತಿ ಗುಂಪಿನ ನಾಲ್ಕು ಜನ ಪ್ರತಿನಿಧಿಗಳು ಮತ್ತು ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಂದಿರು.

| ಕ್ರ.ಸ | ಪದನಾಮ | ಅರ್ಹ ಅಭ್ಯರ್ಥಿಗಳು (ಕೆಳಕಂಡವರು ಅಂಗನವಾಡಿ ವ್ಯಾಪ್ತಿಯಲ್ಲಿರಬೇಕು) |
|---|---|---|
| 1 | ಅಧ್ಯಕ್ಷರು | ವಾರ್ಡಿನ ನಗರ ಪಾಲಿಕೆ ಸದಸ್ಯರು |
| 2 | ಸದಸ್ಯ ಕಾರ್ಯದರ್ಶಿ | ಅಂಗನವಾಡಿ ಕಾರ್ಯಕರ್ತೆ |
| 3 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 4 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 5 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 6 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 7 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ (ಒಬ್ಬರು ಪ.ಜಾ/ಪ.ಪ ಕ್ಕೆ ಸೇರಿರಬೇಕು) |
| 8 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 9 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 10 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 11 | ಸದಸ್ಯರು | ಸ್ಥಳೀಯ ಹಿರಿಯ ನಾಗರೀಕರು. |
| 12 | ಸದಸ್ಯರು | ವಾರ್ಡಿನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರು / ಸಹ ಉಪಾಧ್ಯಾಯರು |
| 13 | ಸದಸ್ಯರು | ಆರೋಗ್ಯ ಇಲಾಖೆಯ ಆಶಾ ಕಾರ್ಯಕರ್ತೆ |

## ಗ್ರಾಮೀಣ ಪ್ರದೇಶದಲ್ಲಿ ಬಾಲವಿಕಾಸ ಸಮಿತಿಯ ರಚನೆ

| ಕ್ರಸ | ಪದನಾಮ | ಅರ್ಹ ಅಭ್ಯರ್ಥಿಗಳು (ಕೆಳಕಂಡವರು ಅಂಗನವಾಡಿ ವ್ಯಾಪ್ತಿಯಲ್ಲಿರಬೇಕು) |
|---|---|---|
| 1 | ಅಧ್ಯಕ್ಷರು | ಪಾಲಿಕೆ ಸದಸ್ಯರು |
| 2 | ಸದಸ್ಯ ಕಾರ್ಯದರ್ಶಿ | ಅಂಗನವಾಡಿ ಕಾರ್ಯಕರ್ತೆ |
| 3 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 4 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 5 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 6 | ಸದಸ್ಯರು | ಸ್ತ್ರೀಶಕ್ತಿ ಗುಂಪಿನ ಪ್ರತಿನಿಧಿ |
| 7 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ (ಒಬ್ಬರು ಪ.ಜಾ/ಪ.ಪ ಕ್ಕೆ ಸೇರಿರಬೇಕು) |
| 8 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 9 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 10 | ಸದಸ್ಯರು | ಅಂಗನವಾಡಿಗೆ ಹಾಜರಾಗುವ ಮಗುವಿನ ತಾಯಿ |
| 11 | ಸದಸ್ಯರು | ಸ್ಥಳೀಯ ಹಿರಿಯ ನಾಗರೀಕರು. |
| 12 | ಸದಸ್ಯರು | ವಾರ್ಡನ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕರು / ಸಹ ಉಪಾಧ್ಯಾಯರು |
| 13 | ಸದಸ್ಯರು | ಆರೋಗ್ಯ ಇಲಾಖೆಯ ಆಶಾ ಕಾರ್ಯಕರ್ತೆ |

## ಬಾಲವಿಕಾಸ ಸಮಿತಿಯ ಕಾರ್ಯ ಮತ್ತು ಜವಾಬ್ದಾರಿಗಳು

- ವರ್ಷಕ್ಕೆ ಎರಡು ಬಾರಿ ಅಂಗನವಾಡಿ ಕೇಂದ್ರದ ಸುಧಾರಣೆಗಾಗಿ, ಫಲಾನುಭವಿಗಳ ಹಿತದೃಷ್ಠಿಯಿಂದ ಕ್ರಿಯಾ ಯೋಜನೆ ರೂಪಿಸುವುದು.
- ಅಂಗನವಾಡಿ ಕೇಂದ್ರಕ್ಕೆ ದಾಖಲಾಗುವ ಮಕ್ಕಳ ತಾಯಂದಿರ ಸಭೆ ನಡೆಸಿ ಮಕ್ಕಳು ಕಲಿತ ಆಟ ಪಾಠಗಳನ್ನು ಪ್ರದರ್ಶಿಸಿ ಪಾಲಕರಿಂದ ಸಲಹೆಗಳನ್ನು ಪಡೆಯುವುದು.
- ಶಾಲಾ ಪೂರ್ವ ಶಿಕ್ಷಣಕ್ಕೆ ನೀಡುವ 1000/- ರೂಗಳನ್ನು ಮಕ್ಕಳಿಗೆ ಯೋಗ್ಯವಾದ ಆಟಿಕೆಗಳನ್ನು ಖರೀದಿಸುವುದು.

- ಅಂಗನವಾಡಿ ಕೇಂದ್ರ ನಡೆಸಲು ಸೂಕ್ತವಾದ ಕಟ್ಟಡವನ್ನು ಒದಗಿಸುವುದು.
- ಅಂಗನವಾಡಿ ಕೇಂದ್ರ ನಿರ್ಮಾಣ ಮಾಡಲು ನಿವೇಶನ ಒದಗಿಸುವುದು.
- ಅಂಗನವಾಡಿ ಕಟ್ಟಡಕ್ಕೆ ಸುಣ್ಣ ಬಣ್ಣ ಮಾಡಿಸುವುದು.
- ಮಕ್ಕಳಿಗೆ ಶೌಚಾಲಯವನ್ನು ನಿರ್ಮಿಸುವುದು.
- ಕುಡಿಯುವ ನೀರು ಪೂರೈಸುವುದು.
- ಅಂಗನವಾಡಿ ಕಾರ್ಯಕರ್ತೆಯು ಪ್ರತಿ ವರ್ಷ ತಪ್ಪದೇ ತನ್ನ ವ್ಯಾಪ್ತಿಯ ಸಮೀಕ್ಷಾ ಕಾರ್ಯವನ್ನು ನಡೆಸುವಂತೆ ಗಮನ ವಹಿಸುವುದು.
- ಸಮೀಕ್ಷಾ ವ್ಯಾಪ್ತಿಯಲ್ಲಿನ ಆರು ವರ್ಷದೊಳಗಿನ ಎಲ್ಲಾ ಮಕ್ಕಳು, ಗರ್ಭಿಣಿ ಹಾಗೂ ಬಾಣತಿಯರು ಅಂಗನವಾಡಿ ಯಲ್ಲಿ ಫಲಾನುಭವಿಗಳಾಗಿ ದಾಖಲಾಗುವಂತೆ ನೋಡಿಕೊಳ್ಳುವುದು.
- ಅಂಗನವಾಡಿ ಕೇಂದ್ರವು ಬೆಳಿಗ್ಗೆ 9.30 ರಿಂದ ಸಂಜೆ 4.30 ರವರೆಗೆ ಸಮರ್ಪಕವಾಗಿ ನಡೆವುವಂತೆ ನೋಡಿಕೊಳ್ಳುವುದು.
- ಅಂಗನವಾಡಿ ಕೇಂದ್ರಕ್ಕೆ ಆಹಾರ ಸಾಮಗ್ರಿಗಳ ಸರಬರಾಜು ಆಗುವ ವೇಳೆಯಲ್ಲಿ ಸಮಿತಿಯ ಇಬ್ಬರು ಸದಸ್ಯರು ಹಾಜರಿದ್ದು ಆಹಾರದ ಗುಣಮಟ್ಟ ಹಾಗೂ ಸರಿಯಾದ ತೂಕ ಇದೆ ಎಂಬುದನ್ನು ದೃಡೀಕರಿಸುವುದು.
- ಪೂರಕ ಪೌಷ್ಠಿಕ ಆಹಾರವು ಫಲಾನುಭವಿಗಳಿಗೆ ಸರಿಯಾದ ಸಮಯಕ್ಕೆ ಸಮರ್ಪಕವಾಗಿ ವಿತರಣೆಯಾಗುವಂತೆ ನಿಗಾವಹಿಸುವುದು.
- ಆರೋಗ್ಯ ಸೇವೆಗಳಾದ ಚುಚ್ಚು ಮದ್ದು, ಆರೋಗ್ಯ ತಪಾಸಣೆ, ಪೌಷ್ಠಿಕ ಶಿಬಿರಗಳು ನಡೆಯುವಂತೆ ನೋಡಿಕೊಳ್ಳೂವುದು.

- ಅಂಗನವಾಡಿ ಕೇಂದ್ರದಲ್ಲಿನ ಮಕ್ಕಳ ಹುಟ್ಟು ಹಬ್ಬವನ್ನು ಆಚರಣೆ ಮಾಡುವುದು.
- ಅಂಗನವಾಡಿ ಕೇಂದ್ರದಲ್ಲಿ ರಾಷ್ಟ್ರೀಯ ಹಬ್ಬಗಳನ್ನು ಆಚರಣೆ ಮಾಡುವುದು.
- ಅಂಗನವಾಡಿ ಕಾರ್ಯಕರ್ತೆ ಶಿಶು ಅಭಿವೃದ್ಧಿ ಯೋಜನೆಯ ಮೇಲ್ವಿಚಾರಕ ಸಿಬ್ಬಂಧಿ ಹಾಗೂ ಗ್ರಾಮ ಪಂಚಾಯಿತಿ ನಡುವೆ ಸಂಪರ್ಕ ಸೇತುವೆಯಾಗಿರುವುದು.
- ಬಾಲವಿಕಾಸ ಸಮಿತಿಯು ಪ್ರತೀ ತಿಂಗಳು ಸಭೆ ನಡೆಸುವುದು, ಕುಂದುಕೊರತೆಗಳ ಬಗ್ಗೆ ಚರ್ಚಿಸಿ ಕ್ರಮ ಕೈಗೊಳ್ಳುವುದು.
- ಅಂಗನವಾಡಿ ಕೇಂದ್ರಕ್ಕೆ ದಾಖಲಾದ 6 ವರ್ಷದೊಳಗಿನ ಮಕ್ಕಳು ಅಂಗನವಾಡಿ ತೊರೆಯದಂತೆ ನೋಡಿಕೊಳ್ಳುವುದು.
- ಅಂಗನವಾಡಿ ಕೇಂದ್ರಗಳ ಅಭಿವೃದ್ಧಿಗೆ ಅವಶ್ಯವಿರುವ ಇತರೆ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು.

## ತಾಯಂದಿರ ಸಭೆ

- ಅಂಗನವಾಡಿಗಳಲ್ಲಿ ತಾಯಂದಿರ ಸಭೆಯನ್ನು ಪ್ರತಿ ತಿಂಗಳು ತಪ್ಪದೇ ಅಂಗನವಾಡಿ ಕಾರ್ಯಕರ್ತೆಯರು ನಡೆಸಬೇಕು. ಸಭೆಯಲ್ಲಿ ತಾಯಂದಿರಿಗೆ ಆರೋಗ್ಯ, ಸ್ವಚ್ಛತೆ, ಇಲಾಖೆಯ ಯೋಜನೆಗಳ ಬಗ್ಗೆ ಮಾಹಿತಿ ನೀಡಿ, ಜಾಗೃತಿ ಮೂಡಿಸಬೇಕು. ಅವರ ಕುಂದು ಕೊರತೆಗಳನ್ನು ಆಲಿಸಿ, ಮೇಲಧಿಕಾರಿಗಳಿಗೆ ತಿಳಿಸಿ, ಸಮಸ್ಯೆಗಳನ್ನು ಬಗೆಹರಿಸಬೇಕು.

ನಿರ್ದೇಶಕರು
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಬಹುಮಹಡಿ ಕಟ್ಟಡ, ಅಂಬೇಡ್ಕರ್ ವೀಧಿ, ಬೆಂಗಳೂರು– 560001
ದೂರವಾಣಿ ಸಂಖ್ಯೆ – 080– 22353776, 22353780

**ಬೆಂಗಳೂರು ನಗರ ಜಿಲ್ಲೆ ಉಪ ನಿರ್ದೇಶಕರ ಕಛೇರಿ ವಿಳಾಸ.**

**ಉಪ ನಿರ್ದೇಶಕರ ಕಛೇರಿ**
ಬೆಂಗಳೂರು ನಗರ ಜಿಲ್ಲೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಸುಧಾರಣಾ ಸಂಸ್ಥೆಗಳ ಸಂಕೀರ್ಣ, ಹೊಸೂರು ರಸ್ತೆ, ಧರ್ಮಾರಾಂ
ಕಾಲೇಜು ಅಂಚೆ, ನಿಮಾನ್ಸ್ ಆಸ್ಪತ್ರೆ ಹತ್ತಿರ, ಬೆಂಗಳೂರು–560029
ದೂರವಾಣಿ ಸಂಖ್ಯೆ – 080–26578688

**ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 5 ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿಗಳಿವೆ.**
**ಅವುಗಳ ವಿಳಾಸ ಈ ಕೆಳಕಂಡಂತಿದೆ.**

1. **ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ**
   ಬೆಂಗಳೂರು ಕೇಂದ್ರ, ನಂ,39,40, 2ನೇ ಮಹಡಿ,
   ಬೆಂಗಳೂರು ಮಹಾನಗರ ಪಾಲಿಕೆ ಕಟ್ಟಡ, ಜೆ.ಸಿ ರಸ್ತೆ,
   ಬೆಂಗಳೂರು, ದೂರವಾಣಿ ಸಂಖ್ಯೆ :– 080-22234490

2. **ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ**
   ಬೆಂಗಳೂರು ಉತ್ತರ, ಯಲಹಂಕ ಉಪನಗರ,
   ಪೋಲೀಸ್ ಠಾಣೆ ಹತ್ತಿರ, ಬೆಂಗಳೂರು
   ದೂರವಾಣಿ ಸಂಖ್ಯೆ :– 28462513

3. **ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ**
   ಬೆಂಗಳೂರು ದಕ್ಷಿಣ, 2ನೇ ಮಹಡಿ,
   ಬೆಂಗಳೂರು ಮಹಾನ್ನಗರ ಪಾಲಿಕೆ ಕಟ್ಟಡ, ಜೆ.ಸಿ ರಸ್ತೆ,
   ಬೆಂಗಳೂರು, ದೂರವಾಣಿ ಸಂಖ್ಯೆ :– 28462513

4. **ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ**
   ಬೆಂಗಳೂರು ದಕ್ಷಿಣ, ವಿವೇಕಾನಂದ ಕಾಲೋನಿ, ಬನಶಂಕರಿ,
   ಕನಕಪುರ ಮುಖ್ಯ ರಸ್ತೆ, ಬೆಂಗಳೂರು
   ದೂರವಾಣಿ ಸಂಖ್ಯೆ :– 080–26713097

5. **ಸಮಗ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಚೇರಿ**
   ಆನೇಕಲ್.

**ಮಕ್ಕಳ ಸಹಾಯವಾಣಿ ಕೇಂದ್ರ – 1098**

ಮಕ್ಕಳಿಗೆ ಯಾವುದೇ ರೀತಿಯ ತೊಂದರೆಯಾದರೆ ಕೂಡಲೇ ಮಕ್ಕಳ ಸಹಾಯವಾಣಿ ಕೇಂದ್ರ–1098 ಗೆ ಉಚಿತ ಕರೆ ಮಾಡಿ ತೊಂದರೆಯಲ್ಲಿರುವ ಮಕ್ಕಳನ್ನು ರಕ್ಷಿಸಿ.

**ಬಾಲ್ಯ ವಿವಾಹ ಶಿಕ್ಷಾರ್ಹ ಅಪರಾಧ**

# ಸಿವಿಕ್ ಬೆಂಗಳೂರು ಕುರಿತು

ಸಿವಿಕ್ ಸಂಸ್ಥೆಯು ಸ್ಥಾಪನೆಗೊಂಡಿದ್ದು 1992ರಲ್ಲಿ ಬೆಂಗಳೂರು ಅಭಿವೃದ್ಧಿ ಏಕೆ ದಾರಿ ತಪ್ಪ
ಅದನ್ನು ಸರಿ ದಾರಿಗೆ ತರಲು ಏನು ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತಿದ್ದ ವಿ
ಹಿನ್ನೆಲೆಯ ಚಿಂತನಶೀಲ ವ್ಯಕ್ತಿಗಳು ಕ್ರಮವಾಗಿ ಸಭೆ ಸೇರಿ, ಚರ್ಚಿಸಿ, ಮುಂದಡಿಯಿಟ್ಟ ಫಲ
ಮೂಡಿದ್ದು 'ಸಿವಿಕ್ ಬೆಂಗಳೂರು'

ನಗರ ಯೋಜನೆ ಮತ್ತು ನಿರ್ವಹಣೆಗಳು ಪಾರದರ್ಶಕವಾಗಿ ಮತ್ತು ಜವಾಬ್ದಾರಿಯುತವಾಗಿ ನ
ನಡೆಸಬೇಕೆಂಬ ವಿಚಾರಕ್ಕೆ ಸಿವಿಕ್ ಪ್ರಯತ್ನ ನಡೆಸುತ್ತಾ ಬಂದಿದೆ. ಸಂವಿಧಾನದ 74ನೇ ತಿದ್ದು
ಹಾಗೂ ಮಾಹಿತಿ ಹಕ್ಕು ಕಾಯ್ದೆ-2005 ನ್ನು ಉಪಯೋಗಿಸಿಕೊಂಡು ಬೃಹತ್ ಬೆಂಗಳ
ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ನಗರಾಡಳಿತದಲ್ಲಿ ನಾಗರೀಕರು ಹ
ಹೆಚ್ಚಾಗಿ ಪಾತ್ರವಹಿಸಬೇಕೆಂದು ಜನವೇದಿಕೆಗಳನ್ನು ರಚಿಸಿ, ಅವುಗಳ ಮೂಲಕ ಕೆಲಸ ಮಾಡುತ್ತಿದೆ

ನಗರದ ಬಡವರೊಡನೆ ಅವರಿಗೆ ತಲುಪಬೇಕಾದ ನೀರು, ಆಹಾರ, ಶಿಕ್ಷಣ, ಆರೋ
ಅಂಗನವಾಡಿ ಯೋಜನೆಗಳು, ಕಾರ್ಮಿಕರ ಯೋಜನೆಗಳು ಮತ್ತು ಸಮಸ್ಯೆಗಳು, ವಿವಿಧ ಪಿಂ
ಯೋಜನೆಗಳು ಮತ್ತು ಜೀವನೋಪಾಯಗಳಂತಹ ಕಾರ್ಯಕ್ರಮಗಳಲ್ಲಿ ಸಕ್ರಿಯವ
ತೊಡಗಿಸಿಕೊಂಡು ಮೂಡಿಬಂದ ಅನುಭವಗಳನ್ನು ನಗರದ ಇತರೆ ಸಂಸ್ಥೆಗಳೊಂದಿಗೆ ಹಂಚಿಕೊ
ಅದರ ಫಲಗಳು ಸಾಕಷ್ಟು ಪಸರಿಸಲು ಪ್ರೇರೇಪಿಸುತ್ತಿದೆ. ವಾರ್ಡ್ ಮಟ್ಟದಲ್ಲಿ ಸಮಾಜದ ಎ
ಸ್ತರಗಳನ್ನು ರೂಪಿಸುವ ಕ್ರಮವನ್ನು ಜಾರಿಗೆ ತರಲು ಪ್ರಯತ್ನಿಸುತ್ತಿದೆ. ಈ ಎಲ್ಲಾ ಕಾರ್ಯಕ್ರಮಗ
ಜನರ ಪಾಲ್ಗೊಳ್ಳುವಿಕೆಗೆ ಮತ್ತು ಕುಂದು ಕೊರತೆಗಳ ಸಮರ್ಪಕ ವಿಲೇವಾರಿಗೆ ಪ್ರಾಮುಖ್ಯತೆ ನಿ
ಅವುಗಳ ವಿನ್ಯಾಸಕ್ಕೆ ರೂಪುಕೊಡುವ ಪ್ರಯತ್ನದಲ್ಲಿ ತೊಡಗಿದೆ.






ಸೂಚನೆ: ಈ ಕೈಪಿಡಿಯು ಅನೇಕ ಮೂಲಗಳಿಂದ ಸಂಗ್ರಹಿಸಲ್ಪಟ್ಟ ಮಾಹಿತಿಯಾಗಿದೆ. ಯಾವುದ
ಸಂದರ್ಭದಲ್ಲಿ ಯಾವುದೇ ವ್ಯಕ್ತಿಗೆ ಈ ಕೈಪಿಡಿಯಲ್ಲಿ ಇರುವ ಮಾಹಿತಿಯಿಂದ ತೊಂದರೆಯಾದಲ್ಲಿ ಸಿವಿ
ಸಂಸ್ಥೆ ಅದಕ್ಕೆ ಜವಾಬ್ದಾರಿಯಾಗಿರುವುದಿಲ್ಲ. ಆದಷ್ಟು ಮಟ್ಟಿಗೆ ನಿಖರ ಮಾಹಿತಿಯನ್ನು ಒದಗಿಸುವತ್ತ ಪ್ರಯ
ಮಾಡಲಾಗಿದೆ. ಇದನ್ನು ಬಳಸುವವರು ಮೂಲ ಮಾರ್ಗಸೂಚಿಯನ್ನು ಓದಲು ಸೂಚಿಸುತ್ತೇವೆ.

**ಸಿವಿಕ್ ಬೆಂಗಳೂರು**
ನಂ. 6, 2ನೇ ಮಹಡಿ, ಕಸ್ತೂರಿ ಅಪಾರ್ಟ್‌ಮೆಂಟ್ಸ್, ನಂ. 35/23, ಲ್ಯಾಂಗ್ ಫೋರ್ಡ್ ರಸ್ತೆ
ಕ್ರಾಸ್, ಶಾಂತಿನಗರ, ಬೆಂಗಳೂರು – 560025
ದೂ. : 080 41144126 ಇ-ಮೇಲ್: info@civicspace.in web : www.civicspace.in